ಶ್ರೀ ಬಾಬುರಾವ ರಾಮರಾವ ಹೇರೂರ ಜನ್ಮ ೧೯೧೮. ಶಿಕ್ಷಣ— ನೂತನ ವಿದ್ಯಾಲಯ. ಕಲ್ಬುರ್ಗಿ; ಪೂನಾ ಫರ್ಗ್ಯುಸನ್ ಕಾಲೇಜ ಮತ್ತು ಅಲಿಗಡ. ಬಿ. ಏ. ೧೯೪೦, ಎಲ್. ಎಲ್. ಬಿ. ೧೯೪೨, ಸ್ಪೇಶಲ್ ಪ್ರೊಜಿಕ್ಯೂಟಿಂಗ ಆಫೀಸರ್ ೧೯೫೦, ವಾಗ್ಮಿಗಳು; ಸಾಹಿತ್ಯ ಸಂಸ್ಕೃತಿಯುಳ್ಳವರು.

ಮುದ್ರಕರು
ಕೆ. ಎಮ್. ಲಂಬಿ.
ಚಿಮ್ಮಲಗಿ ಪ್ರಿಂಟಿಂಗ್ ಪ್ರೆಸ
೭೪೦, ಸೊಲ್ಲಾಪುರ.

# ಅನುಕ್ರಮಣಿಕೆ



——

# ಪ್ರಸ್ತಾವನೆ

ಈ 'ಮುನ್ನುಡಿ' ಯು ಸಿದ್ಧವಾಗಿ ಹನ್ನೆರಡು ವರ್ಷಗಳಾಗಿ ಹೋದವು. ಇಂದೆ, ಮತ್ತೆ ನಾಲ್ಕು ಮಾತು ಸೇರಿಸಿ, ಪ್ರಕಟಿಸುತ್ತಿದ್ದೇನೆ. ಪ್ರಕಟನೆಗೆ ನೆರವಾಗಿ ಪುರಸ್ಕರಿಸಿದ **ಕಲ್‌ಬುರ್ಗಿ ಕರ್ನಾಟಕ ಸಂಘದವರಿಗೂ**, ಅವರ ಪೋಷಕರಾದ **ಶ್ರೀ ಹೇರೂರವರಿಗೂ** ಈ ಸಂದರ್ಭದಲ್ಲಿ ಕೃತಜ್ಞತೆಯನ್ನು ಸಲ್ಲಿಸುತ್ತಿದ್ದೇನೆ.

ಇದರೊಡನೆ ಶ್ರೀ ಲಕ್ಷ್ಮೀಶನ ಜೈಮಿನಿ ಭಾರತದ ಒಂದು ಸಂಗ್ರಹ ಸಂಪುಟವೂ ಸಿದ್ಧವಿದೆ. ಅದೂ ಬೇಗನೆ ಬೆಳಕುಗಾಣಬೇಕು. 'ಮುನ್ನುಡಿ' ಯಲ್ಲಿ 'ಸಂಗ್ರಹ' ಎಂದು ಇದನ್ನೆ ಉದ್ದೇಶಿಸಿದೆ.

ಆ ಸಂಗ್ರಹಕ್ಕೆ ಬೇರೊಂದು ಪ್ರಸ್ತಾವನೆ ಬೇಕು. ತೊರಗಲ್ಲು ಸೀಮೆಯ ಪ್ರಭು ಜಾಯೇಂದ್ರನ ಆಸ್ಥಾನ ಕವಿಯು ಒಂದು ಟೀಕು ಬರೆದಿದ್ದಾನೆ ಸಮಗ್ರ ಕಾವ್ಯಕ್ಕೆ. ಇಂಥ ಟೀಕೆ ಅಪೂರ್ವ. ಬೀಳಗಿ, ಮುದಗಲ್ಲು, ಗದಗು, ತೊರಗಲ್ಲು, ಸೀಮೆಯ ಪ್ರತಿಗಳು ಲಕ್ಷ್ಮೀಶನಿಗಿದ್ದ ರಾಜಮನ್ನಣೆಯನ್ನು ತೋರ್ಪಡಿಸುವವು. ಈ ಎಲ್ಲ ವಿಷಯಗಳನ್ನು ಸಂಗ್ರಹದ ಪ್ರಸ್ತಾವನೆಗೆ ಮೀಸಲಾಗಿ ಇಟ್ಟಿದೆ.

ಸಹಾಯಕರಾದ ಎಲ್ಲ ಮಿತ್ರರಿಗೂ ವಂದನೆ.

**ನಾಡಹಬ್ಬ ಮೊದಲದಿನ (೧೯೫೪)** **ದ. ರಾ. ಬೇಂದ್ರೆ.**

---

30-07-52

# ಪದ್ಯ ಪೀಠಿಕಾ

ಶ್ರೀವಧುವಿನಂಬಕ ಚಕೋರಕಂ ಪೊರೆಯೆ, ಭ |
ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ, ಜಗ |
ತೀವಲಯದಮಲಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ ||
ಆವಗಂ ಸರಸಕರುಣಾಮೃತದ ಕಳೆಗಳಿಂ |
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ |
ದೇವಪುರಲಕ್ಷ್ಮೀರಮಣನಾಸ್ಯಚಂದ್ರನಾನಂದಮಂ ನಮಗೀಯಲಿ|| ||೧||ಸ.೧

ಪ್ರಸ್ತುತದೊಳೊಗೆದ ಮುಂಬೆಳಗಮಲದಂತದ ಗ |
ಭಸ್ತಿ ನವಪೂರ್ವಸಂಧ್ಯಾರುಣಂ ಭಾಳವಿ |
ನ್ಯಸ್ತಸಿಂದೂರಮುಂಕುರಿಪ ಪೊಂಬಿಸಿಲೊಡನೆ ಮೂಡುವೆಳನೇಸರೆಸೆವ ||
ಮಸ್ತಕದಮಣಿಮಣಿಮುಕುಟಮಾಗಲುದಯಾಚಲದ |
ವಿಸ್ತಾರದಂತೆ ಭದ್ರಾಕೃತಿಯೊಪ್ಪುವ ಸ |
ಮಸ್ತಸಿದ್ಧಿಪ್ರದಾಯಕ ವಿನಾಯಕ ಮಾಳ್ಪುದೆಮಗೆ ನಿರ್ವಿಘ್ನತೆಯನು ||೨||ಸ.೧

ಭೂವ್ಯೋಮಪಾತಾಳಲೋಕಂಗಳಲ್ಲಿ ಸಂ |
ಭಾವ್ಯರೆಂದೆನಿಸಿಕೊಳ್ವಖಿಳದೇವರ್ಕಳಿಂ |
ಸೇವ್ಯನಾದಜನ ಪಟ್ಟದ ರಾಣಿ ವರದೆ ಕಲ್ಯಾಣಿ ಫಣಿವೇಣಿ ವಾಣಿ ||
ಕಾವ್ಯಮಿದು ಭುವನದೊಳ್ಸಕಲಜನರಿಂದೆ ಸು |
ಶ್ರಾವ್ಯಮಪ್ಪಂತೆನ್ನ ವದನಾಬ್ಜದಲ್ಲಿ ನೀ |
ನೇವ್ಯಾಪಿಸಿರ್ದಮಲಸುಮತಿಯಂ ತಾಯೆನಗೆ ತಾಯೆ ನಗೆಗೂಡಿ ನೋಡಿ ||೩||ಸ.೧

ಬಾಣರಂ ತಲೆದೂಗಿಸದೆ ನುಡಿದೊಡಾಪದ |
ಕ್ಷ್ಮೋಣೆಯಂ ಬಹದೆಂದು ಸರಸೋಕ್ತಿಯಿಂದೆ ಗೀ |
ರ್ವಾಣಪುರನಿಲಯಲಕ್ಷ್ಮೀವರಂ ತಾನೆ ಸಂಗೀತಸುಕಲಾನಿಪುಣನು ||
ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ |
ವಾಣಿಯಿಂ ಕವಿತೆಯಂ ಪೇಳಿಸಿದನೆಂದರಿದು |
ಕೇಣಮಂ ತೊರೆದು ಪುರುಡಿಸುವರಂಜರಿದುಕಿವಿದೆರೆದು ಕೇಳ್ವುದು ಸುಜನರು ||೪||

ವರವರ್ಣದಿಂದೆ ಶೋಭಿತವಾಗಿ ರೂಪವಿ |
ಸ್ತರದಿಂದೆ ಚೆಲ್ವಾಗಿ ಮಧುರತರನವರಸೋ |
ದರಭರಿತದಿಂದೆ ವಿಲಸಿತವಾಗಿ ಸುಮನೋನುರಾಗದಿಂ ಪ್ರಚುರನಾಗಿ ||
ನಿರುತ ಮಂಜುಳಶಬ್ದದಿಂದೆ ಕಿವಿಗಿಂಪಾಗಿ |
ಚರಿಸುವಸುಲಲಿತ ಷಟ್ಪದಿಗಳೆಡೆವಿಡದೆ ರೆಘಂ |
ಕರಿಸದಿಪ್ಪುವೆ ಬಂದು ನೆರೆದವಿದ್ವತ್ಸಭಾನೀರೇರುಹಾಕರದೊಳು ||೧೨||ಸ. ೧

ಎಲೆ ಮುನಿಪ ಸದಮಲಂ ಮೊದಲೆ ಪಾಲ್ಗಡಲದಕೆ |
ಮಲಯಾನಿಲಂ ತೀಡೆ ಬೆಳ್ದಿಂಗಳಂ ಪೂಡೆ |
ಲಲಿತಸುಮತೋವಾಸಿತಂ ಕೂಡೆ ಮೇಲೆಮೇಲಿನಿದಾಗಿ ತೋರುವಂತೆ ||
ಸಲೆ ಸೊಗಸು ನಿನ್ನ ನುಡಿ ಸರಸಮುಚ್ಚರಿ ಪುಣ್ಯ |
ನಿಲಯಮೆನೆ ಕೃಷ್ಣ ಚರಿತಾಮೃತವನೀಕಿವಿಗ |
ಳೊಲಿದೀಂಟಿ ತಣಿದಪುವೆ ಮುಂಗತೆಯನುಸಿರೆಂದು ಬೆಸಗೊಂಡನವನೀಶನು||೧||ಸ೨೫

ಈಚತುರ್ದಶಭುವನದೊಳ್ಪಾಂಡವಸ್ಥಾಗ |
ನಾಚಾರ್ಯನೆನಿಸಿಕೊಂಬುದೆ ಪೆರ್ಮೆಯೆಂದು ಮನು |
ಜೋಚಿತದ ಲೀಲೆಯಂ ತಳೆದಯಾದವಸಾರ್ವಭೌಮಂ ನಿಜಾನತರ್ಗೆ ||
ಭೂಚಕ್ರದೊಳ್ಪರಿಸರಿಸುನಕೀರ್ತಿಲತೆ ಮೂಢ |
ಲಾಚಂದ್ರವಾಗಿರ್ಪತೆರದಿಂದೆ ಕವಿಮತಿಗೆ |
ಗೋಚರಿಸೆ ಕೃತಿಗೆ ನಾಯಕನಾದನಮರಪುರದೊಡೆಯ ಲಕ್ಷ್ಮೀಕಾಂತನು ||೪೦||

ಪುಣ್ಯಮಿದು ಕೃಷ್ಣಚರಿತಾಮೃತಂ ಸುಕವೀಂದ್ರ |
ಗಣ್ಯಮಿದು ಶೃಂಗಾರಕುಸುಮತರು ತುರುಗಿದಾ |
ರಣ್ಯಮಿದು ನವರಸಪ್ರೌಢಿಲಾಲಿತ್ಯನಾನಾವಿಚಿತ್ರಾರ್ಥಂಗಳ ||
ಗಣ್ಯಮಿದು ಶಾರದೆಯ ಸನ್ಮೋಹನಾಂಗಲಾ |
ವಣ್ಯಮಿದು ಭಾವಕರ ಕಿವಿದೊಡವಿಗೊದವಿದ ಹಿ |
ರಣ್ಯಮಿದು ಭೂತದೊಳೆನೆ ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ ||೪೬ |

........

# ಪೀಠಿಕೆ.



## ೧ ಕವಿ ಚರಿತ್ರೆ.

ಕವಿಲಕ್ಷ್ಮೀಶ – ಅಥವಾ – ಲಕ್ಷ್ಮೀಪತಿಯ ವಿಷಯವಾಗಿ ಅವನ ಒಂದೇ ಒಂದು ಕಾವ್ಯವಾದ 'ಜೈಮಿನಿ ಭಾರತ' ದಿಂದ ತಿಳಿಯುವ ಮಾತುಗಳು ಒಂದೆರಡೆ ಮಾತ್ರ. ಅವನ ಹೆಸರು ಲಕ್ಷ್ಮೀಶ (ಸಂ. ೧, ಪ. ೧೧, ಮೂಲ) ಎಂದೋ ಲಕ್ಷ್ಮೀಪತಿ (ಸಂ. ೩೪; ಪ. ೪೬; ಮೂಲ) ಎಂದೋ ಇರಬೇಕು. ಅವನ ತಂದೆಯ ಹೆಸರು ಅಣ್ಣಮ, ಅಥವಾ ಅಣ್ಣಮಾಂಕ; ಭರದ್ವಾಜ ಗೋತ್ರದವನು. ದೇವ ಪುರದ ಲಕ್ಷ್ಮೀಕಾಂತನು ಅವರ ಕುಲದೇವತೆ. 'ಕವಿಚೂತವನಚೈತ್ರ' ನೆಂದಾಗಲಿ 'ಕವಿಚೈತ್ರವನಚೂತ' ನೆಂದಾಗಲಿ ಅವನಿಗೆ ಬಿರುದಿದ್ದಿತು; ಲಕ್ಷ್ಮೀಶನು ತನ್ನ ಕಾವ್ಯವನ್ನು ಆಗಿನ ಕಾಲದ ಯಾವದೊ ವಿದ್ವತ್ ಸಭೆಗೆ ಓದಿ ತೋರಿಸಿದ್ದನು. (ಸಂ. ೧, ೧೧ ಮೂಲ).

ಅವನಿಗೆ ಯಾವ ಅರಸರೂ ಬಿರುದು ಕೊಟ್ಟಂತೆ ಅವನು ಹೇಳಿಕೊಂಡಿಲ್ಲ. ಯಾವ ಅರಸರ ಆಶ್ರಯವೂ ಅವನಿಗಿದ್ದಂತೆ ತೋರುವದಿಲ್ಲ. (ಸುರಪುರದರಸರ ಆಶ್ರಯದಲ್ಲಿ ಅವನು ಕವಿಯಾಗಿರಬೇಕೆಂದು ರಾಜಪುರೋಹಿತರು ತರ್ಕಿಸುತ್ತಾರೆ.) ತನ್ನ ಪ್ರೀತಿಯ ಕವಿಗಳಾರೆಂಬುದನ್ನು ಪೀಠಿಕಾ ಸಂಧಿಯಲ್ಲಿ ಕಾವ್ಯಸಮಯಾನುಸಾರ ವಾಗಿ ಅವನು ತಿಳಿಸಿಲ್ಲ; 'ಪೂರ್ವಸತ್ಕವಿಗಳ್ಗೆ ನಮಿಸಿ ನಾಂ ಕೃತಿವೇಳ್ವೆನು' ಎಂದು ಒಟ್ಟುಗುತ್ತಿಗೆಯ ಮಾತು ಅಲ್ಲಿ ಇದೆ. ಅವನ ಗುರುಗಳಾರೆಂಬುದೂ ಅವನ ಕಾವ್ಯ ದಿಂದ ಸ್ಪಷ್ಟವಾಗುವದಿಲ್ಲ. 'ಹೃದ್ವನಜದೊಳ್ದೇವಪುರದರಸಿಯರಸನ ಪದದ್ವಯವ ನಾವಗಂ ಧ್ಯಾನಿಸುವರಡಿಗಳಂ ಸದ್ವಿನಯದಿಂ ಭಜಿಪ ಬಲ್ಪಿಂದೆ' ತಾನು ಕಾವ್ಯವನ್ನು ರಚಿಸಿದ್ದಾಗಿ ಅವನು ಹೇಳುವನು ಮಾತ್ರ. ಅವನು ಬೇರೆ ಕೃತಿಗಳನ್ನೇನಾದರೂ ರಚಿಸಿರುವನೊ ತಿಳಿಯದು. ಲಕ್ಷ್ಮೀಶನ ಕೀರ್ತನೆಗಳು ಇವೆ ಎಂದು ದೇವನೂರಿನ ವರು ಹೇಳುವದುಂಟು.

ಹೆಸರು:— ನಮ್ಮ ಕನ್ನಡ ಸಾಹಿತ್ಯದೊಳಗಿನ ಅನೇಕ ಕವಿಗಳ ಸ್ಥಳ, ಕಾಲ, ಮತಗಳ ಬಗ್ಗೆ ತಿಕ್ಕಾಟವಿದ್ದಂತೆ ಲಕ್ಷ್ಮೀಶನ ಬಗ್ಗೆಯೂ ಇದೆ. ಅದೇಕೆ ಇವನ ಹೆಸರು ಲಕ್ಷ್ಮೀಶನೊ ಲಕ್ಷ್ಮೀಪತಿಯೊ ಎಂದೂ ಒಂದು ಸಂಶಯ. ಆದರೆ ನಿರ್ಣಯವು ಸುಲಭವಲ್ಲ. ಸಂಧಿ ೧ ಪದ್ಯ ೧೧ ರಲ್ಲಿ "ಭರದ್ವಾಜಗೋತ್ರಭವನಣ್ಣಮಾಂಕನ ಸುತಂ ಸದ್ವಿನುತ ಕರ್ಣಾಟ ಕವಿ ಚೈತ್ರವನಚೂತ **ಲಕ್ಷ್ಮೀಶನೆಂಬೊರ್ವನು**" ಎಂದು ಕವಿಯ ಹೆಸರು ಸ್ಪಷ್ಟವಾಗಿಯೆ ಬಂದಿದೆ. ಆದರೆ (ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳ ೧೮೭೩-೮೮ ರಲ್ಲಿ ಪ್ರಕಟಿತವಾದ ಲಕ್ಷ್ಮೀಶನ ಜೈಮಿನಿಯಲ್ಲಿ ನಾವು ಕಂಡ ಯಾವ ಓಲೆ ಪ್ರತಿಯಲ್ಲಿಯೂ ಇಲ್ಲದ ಹೆಚ್ಚಿನ ಪದ್ಯವೊಂದು ೩೪ ನೆಯ ಸಂಧಿಯ ಕಟ್ಟಕೊನೆಗಿದೆ. ಇದರಲ್ಲಿ ಕವಿಯ ಹೆಸರು "**ಲಕ್ಷ್ಮೀಶ**" ಎಂದು ಬಂದಿದೆ. ಆದರೆ ಈ ಪದ್ಯವು ನಂಬಿಕೆಗೆ ಅರ್ಹವಾಗುವಂತೆ ತೋರುವದಿಲ್ಲ.) ೩೪ ನೆಯ ಸಂಧಿ ೪೧ ನೆಯ ಪದ್ಯದಲ್ಲಿ "ಕನ್ನಡದ ಭಾಷಾ ಪದ್ಧತಿಯೊಳಣ್ಣಮಾಂಕನ ಕುಮಾರ **ಲಕ್ಷ್ಮೀಪತಿಯ** ಮುಖದಿಂದ ರಚಿಸಿದಂ ಕೃತಿಯಾಗೆ ಸುರಪುರಶ್ರೀಕಾಂತನು" ಎಂದೂ, ಅದೇ ಸಂಧಿಯ ಕೊನೆಯ ಪದ್ಯದಲ್ಲಿ "ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ" ಎಂದೂ ಬಂದಿರುವದರಿಂದ, ಈ ಕವಿಯ ಹೆಸರು "ಲಕ್ಷ್ಮೀಪತಿ" ಎಂದಿರಬಾರದೇ? ಎಂದೆನಿಸುವದು. (ಲಕ್ಷ್ಮೀಶ ತನ್ನನ್ನು ಒಂದೆಡೆಗೆ 'ಲಕ್ಷ್ಮೀಪತಿ' ಎಂದು ಕರೆದುಕೊಂಡಲ್ಲಿ ಪ್ರಾಸದ ಅಗತ್ಯ ಭಾಸವಾಗುವದು. ಗೋವಿಂದ ಕವಿಯು ಇವನನ್ನು 'ಲಕ್ಷ್ಮೀಪತಿ' ಎನ್ನುವದು ನಿಜ. ಕಾವ್ಯದ ಕೊನೆಗೆ 'ಲಕ್ಷ್ಮೀಪತಿ' ಎಂದು ಬಂದಿರುವದರಿಂದ ಸುರಪುರ ಹಸ್ತಪ್ರತಿಯಲ್ಲಿ 'ಲಕ್ಷ್ಮೀಪತಿಕೃತಂ ಸಮಾಪ್ತಂ' ಎಂದು ಬರೆದುದು ಉಂಟು. ಇದಕ್ಕೆ ಪ್ರತಿಯಾಗಿ ಬೊಬ್ಬೂರು ರಂಗ, ಕೊನಯ್ಯ, ಲಕ್ಷ್ಮಕವಿ ಇವರೆಲ್ಲರೂ ಇವನನ್ನು 'ಲಕ್ಷ್ಮೀಶ' ಎಂದೇ ಕರೆಯುವರು. ಅದರ ಗತಿ ಏನು?) ಏನೂ ಇರಲಿ; ಇರಬಹುದು! ಹೆಸರಿನಲ್ಲಿ ಏನಿದೆ? **ಲಕ್ಷ್ಮೀಪತಿಯು** ಲಕ್ಷ್ಮೀಶನಾಗುವದರಿಂದ ಕಾವ್ಯಕ್ಕೆ ಕೊರತೆಯಿಲ್ಲ. ಲಕ್ಷ್ಮೀಶನಿಗಿದ್ದ ಬಿರುದಿನ ವಿಷಯವೂ ಹೀಗೆಯೆ ಪ್ರಶ್ನಾಂಕಿತವಾಗಿದೆ. ಎಲ್ಲಕ್ಕೂ ಹಳೆಯದಾದ 'ಅ' ಪ್ರತಿಯ ಪಾಠವು "ಕವಿಚೈತ್ರವನಚೂತ" ಎಂದಿದೆ. ನಾವೂ ಅದನ್ನೇ ಹಳೆಯ ಪಾಠವೆಂದೇ ಸ್ವೀಕರಿಸಿದ್ದೇವೆ. ಆದರೆ ಉಳಿದ ಅನೇಕ ಪ್ರತಿಗಳಲ್ಲಿರುವಂತೆ "ಕವಿಚೂತವನಚೈತ್ರ" ಎಂದು ಅವನ ಬಿರುದಿದ್ದರೂ ಲಕ್ಷ್ಮೀಶನ ವಿನಯಕ್ಕೆ ಯಾವ ಭಂಗವೂ ಬರಲಾರದು. ಯಾಕೆಂದರೆ ಅದು ವಿದ್ವತ್ಸಭೆಯವರು ಕವಿಗೆ ಕೊಟ್ಟ ಬಿರುದಿರಬೇಕಲ್ಲದೆ ಕವಿಯು ತಾನೇ ತೊಟ್ಟ ಬಿರುದಾಗಿರಲಾರದು.

"ಕನ್ನಡ ಕಬ್ಬಿಗರಾತನ | ಮನ್ನಿಸಿ ಲಕ್ಷ್ಮೀಶನೊರ್ವನೇ ಕವಿರತ್ನಂ ||
ಸನ್ನುತನೆಂದುರು ಬಿರುದಂ | ಚಿನ್ನದಿ **ಕವಿಚೂತಚೈತ್ರನೆನೆ** ಬರೆದಿತ್ತರ್ ||"

ಎಂಬ ದಂತಕಥಾ ಪ್ರಪಂಚದ ಪದ್ಯದಲ್ಲಿಯೂ 'ಕವಿಚೂತಚೈತ್ರ' ಎಂದಿದೆ. ಚೈತ್ರ ವನದಂಥ ಗಾಂಧರ್ವ ನಂದನವನದಲ್ಲಿಯ ಚೂತವೃಕ್ಷ ಎಂದು ಉಪಮಿಸಿದರೇನು, ಕವಿಗಳೆಂಬ ಚೂತವನಕ್ಕೆ ಚೈತ್ರಮಾಸದಂತೆ ಇವನು ಸ್ಫೂರ್ತಿದಾಯಕನೆಂದು ಹೋಲಿಸಿದರೇನು? ಕವಿಯ ಅತಿಶಯಿತ ರಸಾಲತ್ವವೇ ಎರಡಲ್ಲಿಯೂ ಧ್ವನಿತವಾಗು ವದು. ಯಾವ ಬಿರುದಿದ್ದರೂ ಅದು ಲಕ್ಷ್ಮೀಶನಿಗೆ ಅನ್ವಯಿಸುವಂತೆಯೇ ಇದೆ. ಅವನು ರಸಪಕ್ಷಪಾತಿಯೂ, ರಸೋದ್ದೀಪಕನೂ ಆಗಿರುವನೆಂಬುದರಲ್ಲಿ ಸಂಶಯವಿಲ್ಲ. ಹೀಗೆ ಕವಿಯ ನಾಮ, ಬಿರುದುಗಳಿಂದಲೇ ಪ್ರಾರಂಭವಾದ ಸಂಶಯಜಾಲವು ಅವನ ಸ್ಥಲ, ಕಾಲ, ಮತಗಳನ್ನು ವ್ಯಾಪಿಸಿದರೆ ಆಶ್ಚರ್ಯವಲ್ಲ.

**ಸ್ಥಳ:—** ಲಕ್ಷ್ಮೀಶ ಕವಿಯ ವಾಸಸ್ಥಾನವು ಮೈಸೂರು ಸಂಸ್ಥಾನಕ್ಕೆ ಸೇರಿದ ದೇವನೂರೇ? ಇಲ್ಲವೆ, ನೈಝಾಮ ಪ್ರಾಂತಕ್ಕೆ ಸೇರಿದ ಸುರಪುರ ಸಂಸ್ಥಾನದ ಬಳಿಯ ದೇವಪುರವೇ? ಎರಡೂ ಸ್ಥಳಗಳಲ್ಲಿ ಲಕ್ಷ್ಮೀಕಾಂತನ ಗುಡಿಯಿರ ಬಹುದು. ಶ್ರೀವೈಷ್ಣವರ ವಸತಿ ಇರಬಹುದು. ಪ್ರಾಚೀನವಾಗಿ ತೋರಬಹುದಾದ ಲಕ್ಷ್ಮೀಶನ ಜೈಮಿನಿಯ ಪ್ರತಿಗಳಿರಬಹುದು. ಕವಿಯ ಕಟ್ಟೆಯಿರಬಹುದು. ಆದರೆ ಮೈಸೂರಿನ ದೇವನೂರಿನಲ್ಲಿರುವ ಜನರ ಹೇಳಿಕೆಯ ಐತಿಹ್ಯವಿದ್ದಂತೆ ಅದು ಸುರಪು ರದ ದೇವಪುರದಲ್ಲಿರುವದಾಗಿ ಇನ್ನೂ ಕೇಳಬಂದಿಲ್ಲ. ಕಡಬದ ನಂಜುಂಡಶಾಸ್ತ್ರಿ ಗಳು ಕಂಡ ಪ್ರಾಚೀನವಾದ ಓಲೆಯ ಪ್ರತಿಗಳಲ್ಲಿ ೨೬ ನೆಯ ಸಂಧಿಯ ಕೊನೆಯ ೭೭ ನೆಯ ಗದ್ಯದಲ್ಲಿ "ನಡೆದಂ ತುರಗ ಮೆರಡನುಂ ಬಿಡಿಸಿ ಮುಂದಕೆ **ದೇವನೂರ** ಲಕ್ಷ್ಮೀಕಾಂತನು" ಎಂದು ದೇವನೂರಿನ ಸ್ಪಷ್ಟ ಉಲ್ಲೇಖವಿದೆ ಎಂತೆ. ಆದರೆ ನಾವು ಕಂಡ ಯಾವ ಓಲೆಯ ಪ್ರತಿಯಲ್ಲಾಗಲಿ, ಕಾಗದದ ಪ್ರತಿಗಳಲ್ಲಾಗಲಿ ಈ ಪಾಠವಿಲ್ಲ. ಒಂದೆರಡು ಕಡೆಗೆ "**ದೇವಪೂರ**" ಎಂಬ ಅಪಪಾಠವೂ ಅಥವಾ ದೇವ ಪುರದ ಎಂಬ ಪಾಠವೂ ಇದೆ. ಶ್ರೀಮಾನ್ ಮಾಸ್ತಿ ವೆಂಕಟೇಶ ಐಯ್ಯಂಗಾರರು ಸಂಗ್ರಹಿಸಿದ ("ಕವಿಲಕ್ಷ್ಮೀಶ" ಗ್ರಂಥ ಪುಟ ೨೬, ೨೭) ಐತಿಹ್ಯವೂ, ಶ್ರೀಮಾನ್ ಗೋವಿಂದ ಪೈಗಳವರು ಲಕ್ಷ್ಮೀಶನ ಕಾವ್ಯದಿಂದ ಅವನ ದೇಶದ ಬಗ್ಗೆ ಊಹಿಸಿದ ಅನುಮಾನ ಪ್ರಪಂಚವೂ ("ಕವಿಲಕ್ಷ್ಮೀಶ" ಗ್ರಂಥ ಪುಟ ೧೦೦–೧೧೫ ಲೇಖನದ "ಲಕ್ಷ್ಮೀಶ ಕವಿಯ ನಿವಾಸಸ್ಥಾನ") ಮೈಸೂರಿನ ದೇವನೂರನ್ನೇ ಎತ್ತಿ ಹಿಡಿಯು ವವು. ಜಗನ್ನಾಥ ವಿಜಯವನ್ನು ಬರೆದ ರುದ್ರಭಟ್ಟನು ದೇವನೂರಿನ ಲಕ್ಷ್ಮೀಕಾಂತನ ಭಕ್ತನಾಗಿದ್ದನೆಂದು ತಿಳಿದು ಬರುತ್ತದೆ. (ಕ. ಸಾ. ಪ. ಪತ್ರಿಕೆ, ಡಾ. ಎಂ. ಎಚ್. ಕೃಷ್ಣ ಇವರ ಲೇಖನ.) ಇದಲ್ಲದೆ ಜಗನ್ನಾಥ ವಿಜಯದ ಆಶ್ವಾಸಾಂತ್ಯ ಗದ್ಯದಲ್ಲಿ

ಲಕ್ಷ್ಮೀಕಾಂತ ಸ್ವಾಮಿಯ ಅಂಕಿತವು ಬರುವದು. ರುದ್ರಭಟ್ಟನ ಭಾಗವತ ಮತವು ಲಕ್ಷ್ಮೀಶನ ಭಾಗವತ ಮತಕ್ಕೆ ಪೂರ್ವಭಾವಿಯಾಗಿ ತೋರುವದು. ಮೇಲಾಗಿ ಷಡಕ್ಷರಿಯಿಂದ ಪರಾಜಿತನಾದ ರುದ್ರಭಟ್ಟನ ಮಾನವನ್ನು ಕಾಯುವದಕ್ಕಾಗಿ ಲಕ್ಷ್ಮೀಶನು ಜೈಮಿನಿಯನ್ನು ಬರೆದನು ಎಂಬ ದಂತಕಥೆಯೂ (ಕ. ಚ. ಸಂ. ೧ (೧೯೨೪ Edi.) ಪುಟ ೨೬೯) ಲಕ್ಷ್ಮೀಶನ ಸಂಬಂಧವನ್ನು ದೇವನೂರಿನೊಡನೆ ತರುವದು. ಸದ್ಯಕ್ಕೆ ಮೈಸೂರಿನ ದೇವನೂರೇ (ಕಡೂರು ಜಿಲ್ಹೆ) ಲಕ್ಷ್ಮೀಶನ ವಾಸ ಸ್ಥಳವೆಂದು ತಿಳಿಯಲು ಪ್ರಬಲ ವಿರೋಧಗಳಾವವೂ ತೋರುವದಿಲ್ಲ.

ಮೈಸೂರಿನ ದೇವನೂರೇ ಕನ್ನಡ ಜೈಮಿನಿಯ ಜನ್ಮಭೂಮಿಯಾಗಿರ ಬಹುದೆಂಬುದಕ್ಕೆ, ದೇವನೂರಿನ ಸುತ್ತಮುತ್ತಲು ಜನಮೇಜಯನ ಸರ್ಪಯಾಗದ ದಂತಕತೆಗಳು ಹೇರಳವಾಗಿ ತುಂಬಿಕೊಂಡಿರುವದು ಒಂದು ಆನುಷಂಗಿಕ ಪ್ರಮಾಣವೆಂದೂ ಹೇಳಬಹುದು. ಸರ್ಪಯಾಗದ ಕಾಲದಲ್ಲಿಯೇ ಜನಮೇಜಯನು ಜೈಮಿನಿಯಿಂದ ಅವನ ಅಶ್ವಮೇಧದ ಕತೆ ಕೇಳಿದನಂತೆ. ಹಿರಿಮಗಳೂರು ಜನಮೇಜಯನ ಸರ್ಪಯಾಗದ ಸ್ಥಳವಂತೆ. ಶಿವಮೊಗ್ಗೆ ಗೌಜ (ಗೌಜದ ತಾಮ್ರಶಾಸನದಲ್ಲಿ ಉಲ್ಲಿಖಿತವಾದ ಗ್ರಹಣವು ಕ್ರಿ. ಶ. ೧೫೨೧ ರಲ್ಲೊ, ಕ್ರಿ. ಶ. ೧೧೯೪ ರಲ್ಲೊ ಆಯಿತೆಂದು (Old Mysore Gazetteer Page 286) ಹೇಳಿದ್ದಾಗಿದೆ.) ಕುಪ್ಪಗುಡ್ಡೆ, ಬೇಗೂರು ಜನಮೇಜಯ ಹಾಕಿಕೊಟ್ಟ ಅಗ್ರಹಾರಗಳಂತೆ. ಭೀಮನಕಟ್ಟೆ ಮಠದವರು ಜನಮೇಜಯನ ದಾನಶಾಸನ ತೋರಿಸುವರು. ಸ್ಥಳಪುರಾಣಗಳು, ಕುಬ್ಬಟ್ಟೂರನ್ನು ಚಂದ್ರಹಾಸನ ಊರೆಂದೂ, ಬಭ್ರುವಾಹನನ ಮಣಿಪುರವು ಚಾಮರಾಜ ನಗರದ ಹತ್ತಿರವೆಂದೂ, ನೀಲಧ್ವಜನ (ಕು. ವ್ಯಾ. ಭಾರತ ಸಭಾಪರ್ವ ಸ. ೫. ಪ. ೧೦. Old Mysore Gazetteer Page 285) ಮಾಹಿಷ್ಮತಿಯು ಮೈಸೂರೇ ಆಗಬಹುದೆಂದೂ ಸಾರುವವು. ದೇವನೂರು ಹೊಯ್ಸಳರ ಕಾಲದಿಂದಲೆ ವಿದ್ವತ್ ಸಭೆಗೆ ಹೆಸರಾದದ್ದು, ದೇವನೂರು ಚತುಃಸೀಮೆಯ ವಿಷಯವು ಬೇಲೂರ ಶಾಸನಗಳಲ್ಲಿಯೂ (೭೧ ಮತ್ತು ೫೮) ಖ್ಯಾತವಾಗಿದೆ. ಲಕ್ಷ್ಮೀನಾರಾಯಣ ದೇವಸ್ಥಾನದಷ್ಟೆ ಇಲ್ಲಿಯ ಸಿದ್ಧೇಶ್ವರ ದೇವಾಲಯವೂ ಜನಮಾನ್ಯವು. ಲಕ್ಷ್ಮೀಶನ 'ಹರಿಹರ' ವಿಭೇದಮಾಡದ ಸಂಪ್ರದಾಯವು ದೇವನೂರಿನ ಊರಿನದೇ ಆಗಿದೆ. ಈ ಸ್ಥಳವು ಪುರಾಣಗಳ ದಂತಕಥಾಸರಣಿಯಲ್ಲಿ, ಹೇಮಕೂಟದ ದಕ್ಷಿಣದ ಹಸ್ತಿನಾವತಿಯೆಂದರೆ–ಹಂಪಿಯ ಹೇಮಕೂಟದ ಬಳಿಯ ಆನೆಗುಂದಿಯೂ ಆಗಬೇಕು. ವಿಜಯನಗರದ ಕೃಷ್ಣದೇವರಾಯನ ಕಲಿಂಗ ದಂಡಯಾತ್ರೆ, ರಾಯಚೂರ ವಿಜಯಗಳೇ, ಅಶ್ವಮೇಧ ದಿಗ್ವಿಜಯವೋ? ಅಂತೂ, ದೇವನೂರಿನ ಸುತ್ತುಮುತ್ತಲಿನ ದಂತಕಥಾ ಪ್ರಪಂಚವು ಸುರಪುರದ-

ದೇವಪುರಕ್ಕಿಂತ ಕಡೂರಿನ ದೇವನೂರನ್ನೇ ಲಕ್ಷ್ಮೀಶನ ವಾಸಸ್ಥಳವೆಂದು ಸೂಚಿಸುವವು. ಈ ದೇವನೂರಿಗೆ ಲಕ್ಷ್ಮೀನಾರಾಯಣಪುರವೆಂದೂ ಹೆಸರಿದ್ದಿತಾಗಿ ಶಾಸನಗಳಿಂದ ತಿಳಿಯುವದು. ಜೈಮಿನಿಭಾರತದ ಕಥೆಯು ಭಾರತದ ರಾಜಸೂಯಕ್ಕೆ ಪ್ರತಿಸ್ಪರ್ಧಿಯಾಗಿ ತೋರುವದು. ಲಕ್ಷ್ಮೀಶನು ಕು. ವ್ಯಾಸನನ್ನು ಭಕ್ತಿರಸವಿವರಣೆಯಲ್ಲಿ, ಸಮರವರ್ಣನಾಸಮಯಗಳಲ್ಲಿ, ವಿಶೇಷವಾಗಿ, ದ್ರೌಪದಿ, ಧರ್ಮ, ಕೃಷ್ಣರ ಪಾತ್ರಾವಿಷ್ಕರಣದಲ್ಲಿ ಅನುಸರಿಸಿರುವನು. ಕು. ವ್ಯಾ. ಭಾರತ ಸಂ. ೬, ಪದ್ಯ ೧೦ನ್ನು ಲ. ಜೈ. ಭಾ. ಸಂ. ೨, ಪ. ೫ ರೊಡನೆ ಹೋಲಿಸಿದರೆ ಏನೆಂದರೂ ತಾರತಮ್ಯದಿಂದ ಲಕ್ಷ್ಮೀಶನು ದಕ್ಷಿಣ ಸಂಪ್ರದಾಯದವನೆಂದು ಕಂಡುಬರುವದು.

**ಕಾಲ:—** ಲಕ್ಷ್ಮೀಶನು ಯಾವ ಕಾಲದವನು ಎಂಬುದು ತೀರ ತೊಡಕಿನ ಪ್ರಶ್ನೆ. ಶ್ರೀಮಾನ್ ಗೋವಿಂದ ಪೈಗಳವರು ಲಕ್ಷ್ಮೀಶನು ವಿಜಯನಗರದ ಮೊದಲನೆಯ ಹರಿಹರನ ಕಾಲದವನಾಗಿರಬೇಕೆಂದು ("ಕವಿ ಲಕ್ಷ್ಮೀಶ" ಪು೬೬) ಹೇಳುವದನ್ನು ತರ್ಕವು ಒಪ್ಪದು. ಸಂಸ್ಕೃತ ಜೈಮಿನಿ ಭಾರತವೇ ಹರಿಹರನ ಕಾಲಕ್ಕೆ ಪ್ರಖ್ಯಾತಿಗೆ ಬಂದಿತ್ತೋ ಇಲ್ಲವೋ ಹೇಳಲು ಬರುವಂತಿಲ್ಲ. ಮೆಹೆರಬಾನ ರೈಸ್ ಅವರು ಸಂಪಾದಿಸಿದ ಶಬ್ದಾನು ಶಾಸನದ ಪ್ರಥಮಾವೃತ್ತಿಯ (೧೮೯೦) ಉಪೋದ್ಘಾತದ ೪೬ ನೆಯ ಪುಟದಲ್ಲಿ, "ಜೈಮುನಿ ಹುಟ್ಟಿದು || ಲೀಲೆಯಿಂ ಶಾಲಿವಾಹನ ಶಕ ಸಹಸ್ರದಿಂ | ಮೇಲಣ ಮುನ್ನೂರ ಮೂವತ್ತೇಳನೆಯ | ಲಲಿತ ಕಾಲಮಂ ಮನ್ಮಥ ವತ್ಸರಾಶ್ವೀಜ ಬ | ಹುಳ ದಶಮಿಯೊಳು ಜೈಮುನಿ ಕಾವ್ಯಮಂ || ("ಕ. ಲ." ಪುಟ ೭೬, ಶ್ರೀ. ಪೈಗಳವರು ಉದ್ಧರಿಸಿದುದು ) ಎಂಬ ಅಪದ್ಧ ಪದ್ಯವೊಂದಿದೆ. ಈ ಅಸಂಬದ್ಧ ಲಿಖಿತದಿಂದ ಯಾವ ಅನುಮಾನವನ್ನು ಕಟ್ಟುವದೂ ಕೆಲಮಟ್ಟಿಗೆ ಅಪ್ರಮಾಣವೆಂಬೇ ತಿಳಿಯ ಬೇಕಾಗುವದು. ಈ ಪದ್ಯದ ಪ್ರಕಾರ ಕನ್ನಡ ಜೈಮಿನಿಯ ಕಾಲವು ಕ್ರಿ. ಶ. ೧೪೧೫ ಆಗಬೇಕು. ಶ್ರೀಮಾನ್ ಗೋವಿಂದ ಪೈಗಳವರು ಈ ಕಾಲವು ಲಕ್ಷ್ಮೀಶನ ಜೈಮಿನಿಯನ್ನು ಪ್ರತಿ ಮಾಡಿಕೊಂಡವರು ಬರೆದ ಕಾಲವಿರಬಹುದೆಂದು ಸೂಚಿಸುತ್ತಾರೆ. ಆ ಅಪದ್ಧ ಪದ್ಯಕ್ಕೆ ಬೆಲೆ ಕೊಟ್ಟದ್ದೆ ಆದರೆ ಅಲ್ಲಿಯ ಕಾಲ ಲಕ್ಷ್ಮೀಶನ ಜೈಮಿನಿಯು ಹುಟ್ಟಿದ ಕಾಲವೆಂದು ಬರೆದವರ ತಿಳಿವಳಿಕೆ ಇರುವಂತೆ ತಿಳಿದುಕೊಳ್ಳಬಹುದು. ಅಂದರೆ ಆಂಧ್ರ ಜೈ. ಭಾ.ರತಕ್ಕಿಂತ ಮುಂಚಿತವಾಗಿಯೇ ನಮ್ಮ ಕನ್ನಡ ಜೈಮಿನಿಯು ಹುಟ್ಟಿತೆಂದು ತಿಳಿಯಬಹುದು. ಆ ಅರ್ಥದಲ್ಲಿ ಲಕ್ಷ್ಮೀಶನು ಕುಮಾರ ವ್ಯಾಸನಿಗಿಂತ ಪೂರ್ವದವನು ಎಂದು ತಿಳಿಯಬೇಕಾದೀತು. ಆದರೆ ಕುಮಾರವ್ಯಾಸನ ಕಾಲವೇ ಬಹಳ ಹಿಂದಿನದಾಗಿ ಕೆಲವು ವಿದ್ವಾಂಸರಿಗೆ ತೋರುವದು.

ಕುಮಾರ ವ್ಯಾಸನು ಕ್ರಿ. ಶ. ೧೨೩೮–೩೫ ರೊಳಗೆ ಇದ್ದಿರಬೇಕು ಎಂದು ಶ್ರೀ. ಪೈಗಳವರು ತರ್ಕಿಸಿದ್ದಾರೆ. ('ಕುಮಾರವ್ಯಾಸ ಪ್ರಶಸ್ತಿ' ಪುಟ ೨೧.) ಕಾಲದ ಈ ತುದಿಯ ಗತಿ ಹೀಗಾದರೆ, ಕಾಲದ ಆ ತುದಿಗೆ ಲಕ್ಷ್ಮೀಶನನ್ನು ತಳ್ಳುವ ಅನೇಕ ತರ್ಕಗಳು ಆಗಿ ಹೋಗಿವೆ. ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣವನ್ನು ಶೈಲಿಯಲ್ಲಿ ಲಕ್ಷ್ಮೀಶನ ಜೈಮಿನಿಯು ಅನುಸರಿಸುವದೆಂದೂ, ಆದಕಾರಣ ಏನಿದ್ದರೂ ಕನ್ನಡ ಜೈಮಿನಿಯ ರಚನಾ ಕಾಲವು ಕ್ರಿ. ಶ. ೧೫೮೪ ರ ಆಚೆಗೆಂದೂ ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಂಥವರ ಸೂಚನೆಯಿಂದಲೇ ವಿಂಟರನಿಟ್ಝು ಪಂಡಿತರು ಕನ್ನಡ ಜೈಮಿನಿಯ ಕಾಲ ತೀರ ಪೂರ್ವದ್ದೆಂದರೆ ೧೫೮೫ ಎಂದು ಕಾಣಿಸಿರಬೇಕು.

" ಮೆರೆದುದು ಗುಣೇಂದು ಕಳೆ ಪರಿಮಿತಾಬ್ದದಶಕದಿ ಹರಿವಾರ ಕಾರ್ತಿಕದ ಸಿತಪಂಚಮಿಾ ಪ್ರಜಾಪತಿ ಶರದಿ ಸಾಂಗಮೆನಲು " ( ಕ. ಚ. ಸಂಪುಟ ೧ (೧೯೨೪) ಪುಟ ೨೬೦. ) ಎಂಬೀ ಪದ್ಯವನ್ನು ಮೆ|| ರೈಸ್‌ರವರು ಭಾಷಾಭೂಷಣದ ತಮ್ಮ ಪೀಠಿಕೆಯಲ್ಲಿ ಉದ್ಧರಿಸಿರುವರು. ಆದರೆ ರುದ್ರಭಟ್ಟನಿಗಿಂತ ಷಡಕ್ಷರಿಯೇ ಹೆಚ್ಚಿನವನು ಎಂದೂ ಹುಟ್ಟಿಸಿದ ಕಟ್ಟುಕಥೆ ['ಶಿವಕಲಾಬ್ದ ಸಕ ಶುಕ್ಲ ವರ್ಷ ಮಾಧವ ಸಿತಾರ್ಕದಿನ ಜೀವವಾರದೊಳ್ ಭವಿಗಳೆಲ್ಲ ವರರುದ್ರಭಟ್ಟನೆ ಕವಿಯೆನಲ್ ಬರೆದಂ ಒಂದು ಕಾವ್ಯಮಂ' ( ಕ. ಚ. ಸಂ. ೧, ಪುಟ ೨೯ ) ರುದ್ರಭಟ್ಟನು ಶಕೆ ೧೬೧೧ ರಲ್ಲಿ ಅಂದರೆ ಕ್ರಿ. ಶ. ೧೬೮೯ ರಲ್ಲಿ ಒಂದು ಕಾವ್ಯವನ್ನು ಬರೆದನು ಎಂಬ ಕಟ್ಟುಕಥೆ ಇರಬಹುದಾದ ಕಾರಣವೆಂದರೆ ರಾಮನೆಂಬ ಬ್ರಾಹ್ಮಣನು ಜಗನ್ನಾಥ ವಿಜಯವನ್ನು ಕೃಷ್ಣ ಮಂತ್ರಿಗೋಸ್ಕರ ಶಕ ೧೬೧೧ ಶುಕ್ಲ ವರುಷದಲ್ಲಿ ಪ್ರತಿ ಮಾಡಿದ್ದೆ ಇರಲು ಸಾಕು. (ಕ. ಚ. ಸಂ. ೨, ಪುಟ ೫೧೯] ಯನ್ನು ಅಟ್ಟಿ ಓಡಿಸಲು ಹುಟ್ಟಿಬಂದ ಈ ಪದ್ಯವು ಲಕ್ಷ್ಮೀಶನನ್ನು ಷಡಕ್ಷರಿಯ ಉತ್ತರಕಾಲೀನನನ್ನಾಗಿ ಅವನಿಗೊಂದು ಕಾಲ್ಪನಿಕವಾದ ಕ್ರಿ. ಶ. ೧೬೯೦ ಎಂಬ ಕಾಲವನ್ನು ಕೊಟ್ಟಿದೆ. ಈ ಪದ್ಯವನ್ನು ಹಾಗೆ ನಂಬಲು ಬರುವಂತಿಲ್ಲ. ಆ ಪದ್ಯದಂತೆ ರುದ್ರಭಟ್ಟ, ಷಡಕ್ಷರಿ ಇವರಿಬ್ಬರ ಕಾಲವೂ ಸರಿ ಇಲ್ಲ. ಮೇಲಾಗಿ ಅದು ಕಟ್ಟುಕಥೆ. ಅಂದಮೇಲೆ ಆ ಪದ್ಯದಲ್ಲಿ ನಿರ್ದಿಷ್ಟವಾದ ಕಾಲವಾದರೂ ಏಕೆ ನಿಜವಿರಬೇಕು? ಲಕ್ಷ್ಮೀಶನಿಗೆ ತೀರ ಅರ್ವಾಚೀನ ಕಾಲವನ್ನು ಕಲ್ಪಿಸುವಾಗ ಲಕ್ಷ್ಮೀಶನನ್ನು ಸ್ತುತಿಸುವ ಲಕ್ಷ್ಮಕವಿ (೧೭೨೪!) ಕೋನಯ್ಯ (ಸು. ೧೭೪೦!) ಬಬ್ಬೂರ ರಂಗ (ಸು. ೧೭೬೦!) ಇವರುಗಳ ಕಾಲವು ಪ್ರಮಾಣವಾಗಿದ್ದಂತೆ ತೋರುತ್ತದೆ. ಆದರೆ ( ಕವಿ ಲಕ್ಷ್ಮೀಶ ಪುಟ ೫೯–೬೦.) ಕರ್ನಾಟಕ ಕುವಲಯಾನಂದಕಾರನಾದ ಜಾಯೇಂದ್ರನು ಕ್ರಿ. ಶ. ೧೬೭೪ರಲ್ಲಿ

ಆ ಕೃತಿಯನ್ನು ಬರೆದಿರುವದರಿಂದಲೂ ಅದರಲ್ಲಿ ಲಕ್ಷ್ಮೀಶನ ಅನೇಕಾನೇಕ ಪದ್ಯಗಳು ಉಧೃತವಾಗಿರುವದರಿಂದಲೂ ಲಕ್ಷ್ಮೀಶನು ೧೬೭೪ ಕ್ಕಿಂತ ( ಈ ಕಾಲ ಸರಿಯಾಗಿಲ್ಲ. ಅವನ ಕನ್ನಡ ಕುವಲಯಾನಂದದ ಕಾಲವೂ ಅಷ್ಟೇ) ಎಷ್ಟೋ ಹಿಂದಿನವನಾಗಬೇಕು. ನಂದಿಮಹಾತ್ಮ್ಯದ ಗೋವಿಂದ ಕವಿಯು ಲಕ್ಷ್ಮೀಪತಿ (ಲಕ್ಷ್ಮೀಶ) ಯನ್ನು [" ಚತು ರಾಸ್ಯರುದ್ರ ಲಕ್ಷ್ಮೀಪತಿಯನಂತರು | ನ್ನತ ಸತ್ಯಲೋಕಕುಕ್ಷಿಲಾಲ ನಿಧಿ | ವಿತಳಮಂ ಸಾರಲು ಎಮ್ಮರಿವರಾರೆಂದು ಸುಕವೀಂದ್ರಾಭಿಧಾನವನಾಂತು ಕೃತಿಕರ್ತರೆನಿಸಿ ವಿಶ್ರುತರಾಗೆ ಲೋಕದೊಳ್ | ನುತಿಸದವರಾರ್ ||" ( ನಂದಿ. ಪೀಠಿ. ಪ. ೧೫ ] ತನ್ನ ಪೀಠಿಕಾ ಸಂಧಿಯ ೧೫ ನೆಯ ಪದ್ಯದಲ್ಲಿ ಸ್ತುತಿಸಿರುವದಾಗಿ, ಗೋವಿಂದ ಕವಿಯ ಜನ್ಮಸ್ಥಳವಾದ ಖೇಡಬುಯ್ಯರದ ( ಬಿಜಾಪುರ ಜಿಲ್ಹೆ ) ಶ್ರೀ. ಜಾಗಿರದಾರವರು ಕ. ಸಾ. ಪ. ಪತ್ರಿಕೆಯಲ್ಲಿ ಎಪ್ರಿಲ್ ೧೯೩೯ ರ ಸಂಚಿಕೆಯಲ್ಲಿ ಒಂದು ಲೇಖನವನ್ನು ಬರೆದಿದ್ದರು. ಈ ಗೋವಿಂದಕವಿಯ ಕಾಲವು, ನಂದಿ ಮಹಾತ್ಮ್ಯವನ್ನು ಹೇಳಿಸಿದ, ಕವಿಯ ಆಶ್ರಯದಾತನಾದ ಇಮ್ಮಡಿ ಹಾವಳೀಭೈರನ ೧೫೫೮–೧೬೧೭ ರ ವರೆಗಿನ ಕಾಲವೆ ಎಂದು ಶ್ರೀ. ಡಿ. ಎಲ್. ನರಸಿಂಹಾಚಾರರವರು ಸಪ್ರಮಾ ಣವಾಗಿ ನಿರ್ಣಯಿಸಿದ್ದಾರೆ. ಲಕ್ಷ್ಮೀಶನ ಕಾಲವು ಅದಕ್ಕೂ ಪೂರ್ವದ್ದಾಗಬೇಕು. ಚೆನ್ನಬಸವಪುರಾಣದ ಪೀಠಿಕೆಯಲ್ಲಿ ಪ್ರೊ. ಬಸವನಾಳ ಎಂ. ಎ. ಅವರು ಈ ಪದ್ಯವು ಅಷ್ಟು ಪ್ರಮಾಣವಲ್ಲ ಎಂದು ಸಾಧಿಸಲು ಪ್ರಯತ್ನಪಟ್ಟಿದ್ದಾರೆ. ಆದರೆ ಅದು ತರ್ಕಶುದ್ಧವಾಗಿಲ್ಲ. ಚತುರಾಸ್ಯ, ರುದ್ರ, ಲಕ್ಷ್ಮೀಪತಿ, ಅನಂತ ಇವರು ಯಾರೇ ಇರಲಿ ಅವರು 'ಸುಕವೀಂದ್ರ'ರು ಎಂಬುದು ತೀರ ಸ್ಪಷ್ಟವಾಗಿದೆ. ಕನ್ನಡ ಸಾಹಿತ್ಯದಲ್ಲಿ ಲಕ್ಷ್ಮೀಪತಿಯೆಂದರೆ ಲಕ್ಷ್ಮೀಶನಲ್ಲದೆ ಬೇರೆ ಯಾರು ? ಕವಿಗಳ ಕಾಲನಿರ್ಣಯದಲ್ಲಿ ಮತೀಯಾಭಿನಿವೇಶಕ್ಕೆ ಸ್ಥಾನವಿಲ್ಲ. ಚೆನ್ನಬಸವಪುರಾಣವು ಕನ್ನಡ ಜೈಮಿನಿಯನ್ನು ಕೆಲವು ಪದ್ಯಗಳಲ್ಲಿ ಹೋಲುತ್ತಿರಬಹುದು. ಅಥವಾ ಲಕ್ಷ್ಮೀಶನ ಕಾವ್ಯವೇ ವಿರೂಪಾಕ್ಷಪಂಡಿತನ ಕೆಲವು ಪದ್ಯಗಳೊಡನೆ ಸ್ಪರ್ಧೆ ಹೂಡಿರಬಹುದು. ರೀತಿಭೇದದಿಂದ ಪದ್ಯ ಛಾಯಾನುಭಾವ ಭಾವಾನುಭಾವ ಮಾಡುವ ಸಂಪ್ರದಾಯವು ಕನ್ನಡ ಸಾಹಿತ್ಯದಲ್ಲಿ ಪಂಪರನ್ನರ ಕಾಲದಿಂದಲೂ ಅನೂ ಚಾನವಾಗಿ ಕವಿಸಮಯವೆಂಬಂತೆ ಸಾಗಿಬಂದಿದೆ. ಅದು ಸರಿಯೊ, ತಪ್ಪೊ, ಒಳಿತೊ ಕೆಡುಕೊ ಎಂಬುದನ್ನು ಇಲ್ಲಿ ನಿರ್ಣಯಿಸುವದು ಪ್ರಕೃತವಲ್ಲ. ಚೆನ್ನಬಸವಪುರಾ ಣವು ಲಕ್ಷ್ಮೀಶನ ಜೈಮಿನಿಯಿಂದ ಕೃತಿಚೌರ್ಯವನ್ನು ಮಾಡಿರುವದೆಂದು ಮಂಡಿಸಿ ದವನು "ವಿಶ್ವಕೃತಿಪರೀಕ್ಷಣ" ಕಾರನಾದ ಹುಬ್ಬಳ್ಳಿಯ ಹಿರಣ್ಯಗರ್ಭ ಕವಿಯು. [ 'ಕವಿ ಲಕ್ಷ್ಮೀಶ' ಪುಟ ೫೦ ರಲ್ಲಿ ಶ್ರೀ. ಡಿ. ಎಲ್. ನರಸಿಂಹಾಚಾರರು ಲಕ್ಷ್ಮೀ ಶನ ಕಾಲವೆಂದು (ಹಿರಣ್ಯಗರ್ಭ ಕವಿಯ ಮತ ಪ್ರಕಾರ) ಉಲ್ಲೇಖಿಸಿರುವ ಕ್ರಿ. ಶ.

೧೮೭೩ ಇದು ವಿಶ್ವಕೃತಿ ಪರೀಕ್ಷಣದ ಕಾಲವಾಗಿದೆ. ಲಕ್ಷ್ಮೀಶನದಲ್ಲ.] ಅವನ ವಿಮರ್ಶಕ ದೃಷ್ಟಿಯು ಅಷ್ಟು ಸಮರ್ಪಕವೆಂದು ನಾವು ಹೇಳಲಾರೆವು. ಅವನು, ಷಡಕ್ಷರಿಯ ರಾಜಶೇಖರವು, ಲೀಲಾವತಿ, ಚಂದ್ರಪ್ರಭಪುರಾಣ ಮೊದಲಾದ ಜೈನ ಕಾವ್ಯಗಳನ್ನು ಅನುಸರಿಸುವದಾಗಿ ತೋರಿಸಿದ್ದಾನೆ. ಆ ವಿಚಾರವೇ ಬೇರೆ. ಇನ್ನು ಚೆನ್ನಬಸವಪುರಾಣದ ಕಾಲವು ಶ. ಕ. ೧೫೦೭ ತಾರಣ ವರುಷ ಎಂದು ಆ ಪುರಾಣದಲ್ಲಿಯೇ ಹೇಳಿದ್ದಾಗಿದೆ. ಆದರೆ ಅದೇ ಪುರಾಣದಲ್ಲಿ ಕಲಿ ೪೬೮೩ ನೆಯ ಸುಭಾನು ಸಂವತ್ಸರದಲ್ಲಿ ವೀರ ವಸಂತರಾಯನು ಕರ್ನಾಟಕ ದೇಶಕ್ಕೆ ಬಂದು ಆಳುವನು ಎಂಬ ಕಾಲಜ್ಞಾನವು ಹೇಳಲಾಗಿದೆ. ಈ ಸುಭಾನುವೆಂದರೆ ಕ್ರಿ. ಶ. ೧೫೮೪ ಎಂದು ಕವಿಚರಿತೆಕಾರರು ಹೇಳುವರು. (ಕ. ಚ. ಸಂ. ೨, ಪುಟ ೩೧೦) ಸಂವತ್ಸರವು ಸುಭಾನು (೧೫೮೪) ವೆ ಇರಲಿ ಚೆನ್ನಬಸವಪುರಾಣ ಹುಟ್ಟಿದ ತಾರಣ (೧೫೮೪) ವೆ ಇರಲಿ ಈ ಕಾಲಜ್ಞಾನದ ವಸಂತರಾಯನಿಗೂ ಚೆನ್ನಬಸವಪುರಾಣದ ಹುಟ್ಟಿಗೂ ಸೋದರ ಸಂಬಂಧವು ಇರುವದು ವ್ಯಕ್ತವೇ ಇದೆ. ಅಂಥ ವಸಂತರಾಯನು ಕ್ರಿ. ಶ. ೧೫೮೪ ರಲ್ಲಿ ಯಾವನೂ ಬಂದಿರುವದಾಗಿ ಇತಿಹಾಸವು ಹೇಳುವದಿಲ್ಲ. ಏನು, ಮಧುರೆಯ ವೀರಪ್ಪನಾಯಕನೆ ಆ ಅವತಾರವೋ? ಅಥವಾ ವಿರೂಪಾಕ್ಷ ಪಂಡಿತನ ಗುರುವಾದ ವಿದ್ಯಾನಗರಿಯ ಹಿರಿಯ ಮಠದ ಸಿದ್ಧವೀರೇಶನು ಈ ವಸಂತರಾಯನಾಗತಕ್ಕವನಿದ್ದನೊ ಏನೋ! ಯಾಕೆಂದರೆ ಇವನ ಪರಮ ಗುರುವಾದ ಮಳೆಯ ಮಲ್ಲೇಶನು ಮೆಕ್ಕಾವಿಗೆ ಹೋಗಿ ೭೦೦ ಖಲಿಂದರರಿಗೆ ಗುರುವಾಗಿ ತುರುಕಾರಣ್ಯದ ಅನಾವೃಷ್ಟಿಯನ್ನು ನಿವಾರಣೆಮಾಡಿ ಸುಲ್ತಾನರಿಂದ ಪೂಜೆಯನ್ನು ಪಡೆದದ್ದಲ್ಲದೆ ಮಳೆಯ ಮಲ್ಲೇಶನೆಂಬ ಬಿರುದನ್ನು ಪಡೆದಿದ್ದನು. ಹೀಗೆ ಕಲಂದರರಿಗೂ ಸುಲ್ತಾನರಿಗೂ ಮೆಕ್ಕಾವಿಗೂ ಸಂಬಂಧವಿದ್ದ ಈ ಹಿರಿಮಠವು ತಾಳೀಕೋಟೆಯ ಪತನದ ಅನಂತರದಲ್ಲಿ (೧೫೬೪) ಪುನರುತ್ಥಾಪನೆಯ ಪ್ರಯತ್ನದ ಯಾವ ಹೊಂಚಿನಲ್ಲಿದ್ದಿತೋ ತಿಳಿಯದು. ಬರಲಿರುವ ವಸಂತರಾಯನು ಚೆನ್ನಬಸವಪುರಾಣದ ಹುಟ್ಟು-ಸಂವತ್ಸರವಾದ 'ವ್ಯಯದ' ಹಿಂದಿನ ಸುಭಾನುವಿನಲ್ಲಿ ಬರುವನೆಂಬುದು ಚಮತ್ಕಾರವೇ ಸರಿ. ಅಂತೂ ಚೆನ್ನಬಸವಪುರಾಣದ ಜನ್ಮ ಸಂವತ್ಸರವು ಸಂಶಯ-ಕುತೂಹಲಾಸ್ಪದವಾಗಿ ತೋರುವದು. ಅದೇನೆ ಇದ್ದರೂ ಲಕ್ಷ್ಮೀಶ, ವಿರುಪಾಕ್ಷ ಪಂಡಿತರು ಸ್ವಲ್ಪ ಹೆಚ್ಚುಕಡಿಮೆ ಸಮಕಾಲೀನರು ಎಂದು ತಿಳಿಯುವದೆ ಅರ್ಹವೆಂದು ತೋರುವದು. ಈ ಎರಡೂ ಕಾವ್ಯಗಳ ಭಾಷಾಸಂಪ್ರದಾಯವು ಸುಮಾರಾಗಿ ಒಂದು ಕಾಲದ್ದಾಗಿ ತೋರುವದು. ಇದಕ್ಕೆ ಪೋಷಕವಾಗಿ ಶ್ರೀ. ರಾಜಪುರೋಹಿತರವರು ನೈಝಾಮು ಪ್ರಾಂತ್ಯದ ಸುರಪುರ ಸಂಸ್ಥಾನದ ಸಮೀಪದ ದೇವಪುರದಲ್ಲಿ ಅಕ್ಕಸಾಲಿಗರ ಮನೆ

ಯಲ್ಲಿ ದೊರೆಕಿಸಿದ ಕನ್ನಡ ಜೈಮಿನಿಭಾರತದ ಕೈಬರಹದ ಕಾಗದದ ಪ್ರತಿಯಲ್ಲಿ (ಆ ಪ್ರತಿಯನ್ನೇ ಗುಲಬುರ್ಗೆಯ ಶ್ರೀ. ಕಪಟ್ರಾಳ ಕೃಷ್ಣರಾಯರು ದೊರಕಿಸಿ ಸಾಹಿತ್ಯ ಪರಿಷತ್ತಿಗೆ ಕೊಟ್ಟಿದ್ದಾರೆ. ಅದನ್ನೂ ಈ ಸಂಗ್ರಹದ ಸಂಸ್ಕರಣದಲ್ಲಿ ಕೃತಜ್ಞತಾಪೂರ್ವಕವಾಗಿ ಉಪಯೋಗಿಸಲಾಗಿದೆ. ಈ ಪ್ರತಿಯ ಕೊನೆಗೆ " ಅಶ್ವಮೇಧ ಪರ್ವ **ಲಕ್ಷ್ಮೀಪತಿ** ಕೃತಂ ಸಮಾಪ್ತಂ" ಎಂದು ಬರೆದಿದೆ. ಅದು ವಿಚಾರಣೀಯ. ) ಪ್ರತಿಕಾರರು " ವಿಕ್ರಮನಾಮ ಸಂವತ್ಸರದ ಆಶ್ವಿನ ಬಹುಳ ಸಪ್ತಮಿ ಪುಷ್ಯ ನಕ್ಷತ್ರ ಗುರುವಾರ ಅಭಿಜಿತ್ ಕಾಲದಲ್ಲಿ ಅಮೃತಸಿದ್ಧಿಯೋಗದಲ್ಲಿ ಪುಸ್ತಕ ಮುಗಿಸಿ ಅದೆ '' ಎಂದು ಬರೆದಿದ್ದಾಗಿದೆ. ಹೀಗೆ ಒಂದು ಕಾಲವನ್ನು ಸೂಚಿಸಿದಮೇಲೆ ಇನ್ನೊಂದು ಕಾಲವು ಅದರ ಮುಂದೆಯೆ ಸೂಚಿತವಾಗಿದೆ. ಆದರೆ ಆ ಕಾಲವು ಸಂವತ್ಸರಾದಿಗಳಿಂದ ಸೂಚಿತವಾಗದೆ " ಸುರಪುರ ಸಂಸ್ಥಾನದ ಕಿರಾತರು ಬಿಟ್ಟು ಹೋಗಿರಲಾಗಿ ಅವರ ಹಾವಳಿಯೊಳಗೆ ಬರೆದು ಅದೆ: ಎಂದು ಮುಗಿಯಿತು ಎಂದರೆ, ಅವರು ಊರಿಗೆ ಬಾಹೋ ಮುಂದೆ ದೇವದುರ್ಗದ ಕಿರಿಚಿನಾಯಕ ಬಂದು ಇರಲಾಗಿ ಮುಗಿಯಿತು '' ಎಂದು ಒಂದು ಐತಿಹಾಸಿಕ ಘಟನೆಯಿಂದ ಸೂಚಿತವಾಗಿದೆ. ಈ ಕಾಲವು ಸಂಶೋಧಕರಾದ ಶ್ರೀ. ರಾಜಪುರೋಹಿತರ ಗಣನೆಯ ಪ್ರಕಾರ ಕ್ರಿ. ಶ. ೧೭೭೫ ರಿಂದ ೮೨ ರ ವರೆಗಿನದಾಗುವದು. ಇದು ಕೈಪ್ರತಿಯ ಕಾಲ. ಅದರ ಪೂರ್ವದಲ್ಲಿ ಸೂಚಿತವಾದ ಸಂವತ್ಸರವು ಪ್ರತಿಮಾಡಿದವನ ತಿಳಿವಳಿಕೆಯಮಟ್ಟಿಗೊ ಅಥವಾ ಅವನ ಪ್ರತಿಗೆ ಮಾತೃಕೆಯಾದ ಪ್ರತಿಯನ್ನು ಮಾಡಿದವರ ಮತದ ಮಟ್ಟಿಗೊ ವಿಕ್ರಮನಾಮ ಸಂವತ್ಸರವಾಗಿರಬೇಕು. ಇದು ಶ್ರೀ. ರಾಜಪುರೋಹಿತರ ಲೆಕ್ಕದ ಪ್ರಕಾರ ಕ್ರಿ. ಶ. ೧೫೨೦ ಆಗುವದು ಆದರೆ ಆ ವರುಷದ ಆಶ್ವಿನ ಬಹುಳ ಸಪ್ತಮಿಯು ಬುಧವಾರವಾಗುವದರಿಂದಲೂ–ಗುರುವಾರವಲ್ಲದರಿಂದಲೂ 'ವಿಕ್ರಮವು' 'ವಿಕೃತಿ' ಆಗಿರಬಹುದು ಎಂದು ಸೂಚಿಸಿ ಶ್ರೀ. ಗೋವಿಂದ ಪೈಗಳವರು ಅದರ ಕಾಲ ಕ್ರಿ. ಶ. ೧೫೩೦ ಎಂದು ತಿದ್ದಲೆಳಸುತ್ತಾರೆ. ('ಕವಿಲಕ್ಷ್ಮೀಶ' ಪುಟ ೭೨–೭೩) ಆದರೆ ಶ್ರೀ. ಪೈಗಳವರ ಮತದಲ್ಲಿ ಇದೂಕೂಡ ಜೈಮಿನಿ ಪ್ರತಿಮಾಡಿದ ಕಾಲ ಮತ್ತು ಕಿರಿಚಿನಾಯಕನ ಕಾಲವೆಂಬುದು ಸ್ಪಷ್ಟವಿದೆ. ಅದು ಕ್ರಿ. ಶ. ೧೫೩೦ ರಷ್ಟು ಹಿಂದಿನದಲ್ಲ. ಆದಕಾರಣ ಒಂದು ವಾರದ ಅಥವಾ ತಿಥಿಯ ಹೆಚ್ಚುಕಡಿಮೆಯನ್ನು ಒಪ್ಪಿಕೊಂಡು ಲಕ್ಷ್ಮೀಶನ ಜೈಮಿನಿಯ ಕಾಲವು ಕ್ರಿ. ಶ. ೧೫೨೦ ಕ್ಕಿಂತ ಹಿಂದಿನದಲ್ಲ ಎಂದು ನಾವು ಸದ್ಯಕ್ಕೆ ಇಟ್ಟುಕೊಳ್ಳಬಹುದು. ( ಲಕ್ಷ್ಮೀಪತಿ [ಲಕ್ಷ್ಮೀಶ] ಯನ್ನು ಹೊಗಳುವ ಚಿತ್ರಭಾರತದ ಗೋವಿಂದ ಕವಿಯು (ಸಂಧಿ ೩೦, ಪದ್ಯ ೧೭) " ವಿನುತ ವಿಷುನಾಮ ಸಂವತ್ಸರದ ದಕ್ಷಿಣಾ | ಯನ ವರ ಹೇಮಂತರಿತು ಮಾರ್ಗಸಿರಮಾಸದೊಳ್ | ವಿನು

ಗುತಿಹ ಶುಕ್ಲ ಪಕ್ಷದ ಪಂಚಮಿಯಲು ವಿಧುವಾರ ವಿಷ್ಣುತಾರೆ | ಜನಿತ ಹರುಷಣ ನಾಮ ಯೋಗ ಬಾಲವ ಕರಣ ಘನನಿಲಯ ದಿವದಭೂಮುತ್ರಿತೀಯದಲಿ ನೂತನ ಮೆನಲ್ಕಾವ್ಯಮಂ ಪೇಳ್ದನಾ ಗೋಪಕವಿ ಸುಕವಿ ಕಂಠಾಭರಣನು || ಎನ್ನುವನು. ಇವನೆ ನಂದಿಮಹಾತ್ಮ್ಯವನ್ನು ಬರೆದನು. ಮೇಲಿನ ಕಾಲವು ಕ್ರಿ ಶ. ೧೫೮೧ ಕ್ಕೆ ಸರಿ ಹೋಗುವದು. ಲಕ್ಷ್ಮೀಶ ಕ್ರಿ. ಶ. ೧೫೮೧ ಕ್ಕೆ ಮುಂಚಿನವನೆಂಬುದು ನಿಶ್ಚಿತ. ಕನಕ ದಾಸರ ಮೋಹನತರಂಗಿಣಿಯಲ್ಲಿ ಲಕ್ಷ್ಮೀಶನ ಪ್ರಭಾವಕಂಡು ಬರುವದರಿಂದ ಲಕ್ಷ್ಮೀಶನ ಕಾಲ ಕ್ರಿ. ಶ. ೧೫೫೩-೫೪ ಕ್ಕೆ ಪೂರ್ವದ್ದು. ಜೈ. ಭಾ. ಸಂಧಿ ೨೮, ಪದ್ಯ ೪೭ ರಲ್ಲಿ 'ಸಿಡಿಗುಂಡಿ'ನ ಮಾತು ಬರುವದು; ( ಆದರೆ 'ಪೆಟಲು'ಗಳ ಮಾತು ಬರುವದಿಲ್ಲ. ) ಆದಕಾರಣ 'ಸಿಡಿಗುಂಡು' ಉಪಯೋಗಿಸಿದ ಕೃಷ್ಣದೇವರಾಯನ ರಾಯಚೂರ ವಿಜಯದ ಕ್ರಿ. ಶ. ೧೫೨೦ ವರ್ಷವೇ ಲಕ್ಷ್ಮೀಶನ ಜೈಮಿನಿಯ ಕಾಲ ವಾಗಬಹುದು. )

ವಿಜಯವಿಠ್ಠಲನ ಗುಡಿಯ ಕಟ್ಟಡದಿಂದ ಕಳಶಸ್ಥಾಪನೆಯ ಕಾಲವು ಕ್ರಿ. ಶ. ೧೫೧೩-೧೫೩೦ ವರೆಗಿನದಾಗುವದು. ಕ್ರಿ. ಶ. ೧೫೨೦ ರಲ್ಲಿ ಕೃಷ್ಣದೇವ ರಾಯನು ವಿಜಯವಿಠ್ಠಲನಿಗೆ ರಾಯದುರ್ಗ ತಾಲೂಕಿನ ದೇವಸಮುದ್ರ ಮೊದಲಾದ ನಾಲ್ಕೂರುಗಳನ್ನು ದತ್ತಿಯಾಗಿ ಕೊಟ್ಟನು. ಕ್ರಿ. ಶ. ೧೫೨೦ ರಲ್ಲಿ ವಿಜಾಪುರದ ಅದಿಲ್‌ಶಹನಿಗೂ ಕೃಷ್ಣದೇವರಾಯನಿಗೂ ಕಾಳಗವಾಯಿತು. ಇದೇ ಕಾಲಕ್ಕೆ ಪಂಢರ ಪುರದ ವಿಠ್ಠಲಮೂರ್ತಿಯನ್ನು ವಿಜಯನಗರಕ್ಕೆ ತಂದಿರಲು ಸಾಕು. (Vijayanagar Sexcentenary Volume Page 194 ). ಇದೇ ಕಾಲದ ಮೋಹನತರಂಗಿಣಿ (ಸಂ.೧ ಪದ್ಯ ೧೬) ಯಲ್ಲಿಯೂ ವಾದಿರಾಜರ ಪ್ರಬಂಧದಲ್ಲಿಯೂ [ ಚೌಂಡರಸನ ಅಭಿನವದ ಶಕುಮಾರ ಚರಿತೆಯು ಇದೇ ಕಾಲದ್ದಾಗಬಹುದು. ಚೌಂಡರಸನು ತನ್ನ ನಳಚರಿತ್ರೆ ಯಲ್ಲಿ ತಾನು 'ಕರ್ಣಾಟ ವಂಶೇ ಶೃಂಗಾರಸಾರ' ನೆಂದೆಂದುಕೊಳ್ಳುವನು. ಕನ್ನಡ-ಕರ್ಣಾಟವಂಶದ ಬ್ರಾಹ್ಮಣ ಕುಲವು ವಿದ್ಯಾರಣ್ಯ-ಲಕ್ಷ್ಮೀಧರರ ಅನಂತರ ಪ್ರಖ್ಯಾತಿ ವೆತ್ತಿತು ] ವಿಠ್ಠಲ ಭಕ್ತ 'ಪುಂಡರೀಕ'ನ ವಿಷಯ ಬರುವದು. ಕ್ರಿ ಶ. ೧೫೨೦-೨೧ ರಲ್ಲಿ ಕೃಷ್ಣದೇವರಾಯನು 'ಯವನರಾಜ್ಯ ಸ್ಥಾಪನಾಚಾರ್ಯ'ನೆಂದು ಬಿರುದು ಧರಿ ಸುವನು. ಯವನರ ಐದು ರಾಜ್ಯಗಳ ಸ್ಥಾಪನೆಯಿಂದಲೆ ಕೃಷ್ಣದೇವರಾಯನು ಶ್ರೀ ಕೃಷ್ಣನಂತೆ ಪಂಚ'ಪಾಂಡವ ಸ್ಥಾಪನಾಚಾರ್ಯ'ನೇನೋ, (ಜೈಮಿನಿ ಭಾ. ಸಂ. ೩೪-೪೦ ಸಂ, ೨, ೫೩) ತೆಲಗಿನಲ್ಲಿಯೂ, ಸಂಸ್ಕೃತದಲ್ಲಿಯೂ, ಕನ್ನಡದಲ್ಲಿಯೂ ಇದೇ ಕಾಲಕ್ಕೆ ಕೃಷ್ಣದೇವರಾಯನನ್ನು ಪರ್ಯಾಯದಿಂದ ಸ್ತುತಿಸುವ ಕೃಷ್ಣಚರಿತಾಮೃತ ಗಳು ಹುಟ್ಟಿದವು. ದೇವಪುರ ಪ್ರತಿಯೊಳಗಿನ ವಿಕ್ರಮ ಸಂವತ್ಸರ ಆಶ್ವಿನ ಶುದ್ಧ

ಸಪ್ತಮಿಯು ಲಕ್ಷ್ಮೀಶನ ಜೈಮಿನಿಭಾರತ ಹುಟ್ಟಿದ ಕಾಲವೆಂದಿಟ್ಟುಕೊಳ್ಳಬಹುದೇನೋ ಎಂದು ತೋರುವದು. ಕುಮಾರವ್ಯಾಸ ಕುಮಾರ ವಾಲ್ಮೀಕಿಗಳನಂತರ ಮತ್ತು ಪುರಂದರದಾಸ, ಕನಕದಾಸರ ಈಚೆಗೆ ಲಕ್ಷ್ಮೀಶನ ಕಾಲವಿರಬೇಕು. ಇದೇ ಕಾಲದ ದೇವನೂರಿನ ಶಿಲಾಶಾಸನಗಳೆರಡು ಲಕ್ಷ್ಮೀನಾರಾಯಣನ ಗುಡಿಗೆ ವಿಶೇಷ ದಾನಮಾಡಿದ ಸಂಗತಿಗಳನ್ನು ಕುರಿತು ಹೇಳುವವು. ) ಕವಿಚರಿತ್ರೆ ಮೂರನೆಯ ಸಂಪುಟದ ಅನುಬಂಧದಲ್ಲಿ [ಪು. ೪೨೨] ಯಾವ ಭಾಗಕ್ಕೂ ಸೇರದ ಪುಸ್ತಕಗಳ ಪಟ್ಟಿಯನ್ನು ಕೊಡಲಾಗಿದೆ. ಅದರಲ್ಲಿ ನಂಜುಂಡನ 'ಚಂದ್ರಹಾಸಚರಿತ್ರ'ದ ಹೆಸರು ಬರುವದು. ಈ ಚಂದ್ರಹಾಸನು ಜೈ. ಭಾರತದವನಾದರೆ, ನಂಜುಂಡ ಕವಿಯು ಕುಮಾರರಾಮನ ಸಾಂಗತ್ಯದ ಕರ್ತೃವೇ ಆದರೆ ಲಕ್ಷ್ಮೀಶನ ಕಾಲ ಕ್ರಿ. ಶ. ೧೫೨೦ ರ ಸುಮಾರೆಂದೇ ಆಗುವದು. ನಂಜುಂಡನ ಕಾಲ ಇ. ಸ. ೧೫೨೫. ) 'ಗೌಜ'ದ ತಾಮ್ರಶಾಸನಗಳ ಗ್ರಹಣಕಾಲ ಇ. ಸ. ೧೫೨೧ ಆಗುವದನ್ನೂ ಲಕ್ಷಿಸಬಹುದು. ಇದಲ್ಲದೆ, ಕ. ಸಾ. ಪತ್ರಿಕೆ ೧೯೪೫ ಮಾರ್ಚ ಸಂಚಿಕೆಯಲ್ಲಿ ಶ್ರೀ. ಹುಲ್ಲೂರ ಶ್ರೀನಿವಾಸ ಜೋಯಿಸರು 'ಕವಿಕೋನಪ್ಪ' (ಪುಟ ೧೮-೨೦) ನನ್ನು ಕುರಿತು ಬರೆದ ಟಿಪ್ಪಣದಂತೆ 'ಕೋನಪ್ಪ' ಕೋನಯ್ಯನಾದರೆ, ಲಕ್ಷ್ಮೀಶನು ಕೃಷ್ಣದೇವರಾಯನ ಕಾಲದವನೆಂಬುದೇ ಸರಿ ಎಂದು ತೋರುವದು. ಪ್ರೊ. ಮುಗಳಿಯವರ ಇ. ಸ. ೧೫೫೦ ಕ್ಕಿಂತ, ೧೫೩೦ ಆಗಲಿ, ಅದಕ್ಕೂ ೧೫೨೦ ವಿಕ್ರಮವೆಂದೇ ಆಗಲಿ ತೋರುವದು. ಲಕ್ಷ್ಮೀಶನು ವಿರೂಪಾಕ್ಷ ಪಂಡಿತನಿಗಿಂತ ಗುಬ್ಬಿಯ ಮಲ್ಲಣಾರ್ಯರಿಗೆ ಹೆಚ್ಚು ಸಮೀಪ. ಇಂತು ಲಕ್ಷ್ಮೀಶನು ಕ್ರಿ. ಶ. ೧೫೨೦ ರಿಂದ ಕ್ರಿ. ಶ. ೧೫೮೫ ರ ವರೆಗಿನವನಾಗಬಹುದು. ಲಕ್ಷ್ಮೀಶನ ಜೈಮಿನಿಯೊಳಗಿನ ಕೃಷ್ಣದಿಗ್ವಿಜಯುವನ್ನೂ, ಮಾಹಾತ್ಮ್ಯೆಯನ್ನೂ ಲಕ್ಷಿಸಿದರೆ ಲಕ್ಷ್ಮೀಶ ಕೃಷ್ಣದೇವರಾಯನ ಕಾಲದವನಾದರೂ ಆಗಬಹುದು. ಇನ್ನೂ ಬಲವತ್ತರ ಪ್ರಮಾಣಗಳು ಸಿಕ್ಕುವ ವರೆಗೂ ಲಕ್ಷ್ಮೀಶನ ಕಾಲವು ಕೆಲಮಟ್ಟಿಗೆ ಅನಿಶ್ಚಿತವಾಗಿಯೇ ಉಳಿಯುವದು. ಕನಕದಾಸರ ಮೋಹನತರಂಗಿಣಿಯಲ್ಲಿ ಲಕ್ಷ್ಮೀಶ ಎಂಬ ಹೆಸರು ಕವಿನಾಮವಾಗಿರಬಹುದೋ ಎಂದು ಸಂಶಯ ಬರುವಂಥ ಒಂದು ಸಂದಿಗ್ಧ ಸ್ಥಾನದಲ್ಲಿದೆ. ಕಾಲನಿರ್ಣಯದಲ್ಲಿ ಸದ್ಯಕ್ಕೆ ಅದರಿಂದ ಬಹಳ ಉಪಯೋಪವಿಲ್ಲ. ( ಲಕ್ಷ್ಮೀಶನ ಕಾಲದ ವಿಷಯದಲ್ಲಿ ಭಿನ್ನಮತಗಳನ್ನು 'ಕವಿಲಕ್ಷ್ಮೀಶ' ಪುಟ ೫೦-೬೧ ರಲ್ಲಿ ನೋಡಬಹುದು ಅದೇ ಗ್ರಂಥದಲ್ಲಿಯ ಶ್ರೀ. ಗೋವಿಂದ ಪೈಗಳವರ ಲೇಖನವು ಪುಟ ೫೬-೮೯ ಕಾಲ ವಿಷಯುವನ್ನೇ ಚರ್ಚಿಸುತ್ತಿದೆ. )

**ಮತ:—** ಕವಿಯ ಕಾಲನಿರ್ಣಯದಿಂದ ಅವನ ಸ್ವಾತಂತ್ರ್ಯವೊ ಛಾಯೋಪಜೀವಿತ್ವವೊ ಸೂಚಿತವಾಗುವಂತೆ ಅವನ ಮತ ನಿರ್ಣಯವು ಅವನ ಪ್ರತಿಭಾವಿಷ

ಯದಲ್ಲಿ ಬಹಳ ಸಾಧಕವಾಗಲಿ ಬಾಧಕವಾಗಲಿ ಆಗುವದಿಲ್ಲ. ಅವನ ಮತ ತಿಳಿದರೆ ಕೆಲವು ಕಾವ್ಯಭಾಗಕ್ಕೆ ವಿಶಿಷ್ಟ ಅರ್ಥ ಉಂಟಾಗಬಹುದು. ತಿಳಿಯದಿದ್ದರೆ ಅಷ್ಟು ಬಾಧೆ ಏನೂ ಇಲ್ಲ. ಸ್ಥಳ ವಿಚಾರವೂ ಅಷ್ಟೆ. ಅವನು ಯಾವ ಪ್ರದೇಶದವನು ಎಂಬುದು ತಿಳಿಯುವದರಿಂದ ಅವನ ಕಾವ್ಯದಲ್ಲಿ ಬರುವ ಸೃಷ್ಟಿವರ್ಣನೆಗೂ ಲೋಕ ವ್ಯವಹಾರಕ್ಕೂ ಏನಾದರೂ ಸಂಗತಿಯು ಇದೆಯೊ ಎಂಬ ರಸಿಕ–ಕುತೂಹಲವನ್ನು ಅದು ತೃಪ್ತಿಗೊಳಿಸುವದು. ಅದು ತಿಳಿಯದಿದ್ದರೆ ಕಾವ್ಯದ ರಸಕ್ಕೇನೂ ಕೊರತೆಬರದು. ಕವಿಯು ದೇವನೂರಿನವನೇ ಆದರೆ ಅಲ್ಲಿಯ ಐತಿಹ್ಯದಂತೆ ಅವನು ಶ್ರೀವೈಷ್ಣವನು ಇರಲು ಸಾಕು. ('ಕವಿಲಕ್ಷ್ಮೀಶ' ಪುಟ ೧೩೨, ೧೩೩.) ಆದರೆ ಲಕ್ಷ್ಮೀಶನು ಸ್ಫುಟವಾಗಿ ದ್ವೈತಾದ್ವೈತ ವಿಶಿಷ್ಟಾದ್ವೈತಗಳಲ್ಲೊಂದನ್ನೂ ಎತ್ತಿಹಿಡಿಯುವಂತಾಗಲಿ ಒತ್ತಿಹೇಳುವಂತಾಗಲಿ ತೋರುವದಿಲ್ಲ. ಮೂಲ ಸಂಸ್ಕೃತ ಜೈಮಿನಿಯು ಭಾಗವತಪಂಥದ್ದಾಗಿರುವದರಿಂದ ಕನ್ನಡ ಜೈಮಿನಿಯ ಮತವಾದರೂ ಅದೇ ಆಗಿರುವದು ಸ್ವಾಭಾವಿಕವಂತೂ ಇದ್ದೇ ಇದೆ. ಈ ಭಾಗವತ ಮತದ ಒಂದು ವೈಲಕ್ಷಣ್ಯವೆಂದರೆ ಅದರ ಭಕ್ತಿಮಾರ್ಗವು ಬಾಯಿಬಿಚ್ಚಿ ಒಡೆದು ಆಡದಿದ್ದರೆ ದ್ವೈತಾದ್ವೈತ ವಿಶಿಷ್ಟಾದ್ವೈತಗಳಲ್ಲಿ ಯಾವುದನ್ನೂ ಅದು ವಿರೋಧಿಸುವಂತೆ ತೋರಿಬರುದಿಲ್ಲ. ಈ ಮೂರೂ ಮತಗಳಲ್ಲಿ ಯಾವದಕ್ಕೂ ಬಾಧೆ ಬರದಂತೆ ಜೈಮಿನಿ ಭಾರತವನ್ನು ಹೇಳಿಕೊಂಡು ಹೋಗಬಹುದು. ಆದರೆ ಈ ಮತಗಳ ವಿಶಿಷ್ಟ ಲಕ್ಷಣಗಳನ್ನು ಎತ್ತಿಹೇಳಿಯಾಗಲಿ ಒತ್ತಿ ವಿರೋಧಿಸಿಯಾಗಲಿ ಆಡಿದಾಗಲೆ ಕವಿಯ ಒಲವು ಕಂಡಬರಬಹುದು. ಕೆಲವೊಂದು ಬಗೆಯ ಅದ್ವೈತವನ್ನು ಮಾಧ್ವದ್ವೈತವೂ ಒಪ್ಪಿಕೊಳ್ಳುವದು. ಶಾಂಕರಾದ್ವೈತವು ಭಕ್ತಿಪ್ರಪಂಚಕ್ಕೆ ವಿರುದ್ಧವಾಗಿಲ್ಲೆಂಬುದು ಶಂಕರಾಚಾರ್ಯರ ಸ್ತೋತ್ರಗಳಿಂದಲೇ ಕಂಡುಬರುವದು. ವಿಶಿಷ್ಟಾದ್ವೈತವಂತೂ ಭಕ್ತಿಪ್ರಧಾನವಾಗಿಯೂ ವಿಶಿಷ್ಟವಾದ ಅದ್ವೈತವು. ಹೀಗೆ ಈ ವೇದಾಂತಗಳ ಸ್ಥಿತಿ ಇರುವಾಗ ಲಕ್ಷ್ಮೀಶನ ಜೈಮಿನಿಯೊಳಗಿನ ವಸ್ತುವಿಶಿಷ್ಟವಾದ ಮತ್ತು ಪಾತ್ರಸಾಪೇಕ್ಷವಾದ ವಚನಗಳಿಂದ ಮತ ವಿಷಯವನ್ನು ಹೆಕ್ಕಿ ತೆಗೆಯುವದು ಕಷ್ಟದ ಕೆಲಸ. ಆದರೂ ರುದ್ರಭಟ್ಟ, ಚೌಂಡರಸ ಕುಮಾರವ್ಯಾಸ, ಕನಕದಾಸ, ಕುಮಾರ ವಾಲ್ಮೀಕಿ, ಚಾಟು ವಿಠ್ಠಲನಾಥರೇ ಮೊದಲಾದ ಕನ್ನಡ ಭಾಗವತದ ಕವಿಮಂಡಲ-ಇವರೆಲ್ಲರಲ್ಲಿಯೂ ತೋರಿ ಬರುವ ಕೆಲವೊಂದು ಮತ ವೈಲಕ್ಷಣ್ಯಗಳೇ ಲಕ್ಷ್ಮೀಶನ ಜೈಮಿನಿಯಲ್ಲಿಯೂ ಕಂಡು ಬರುವವು. ತ್ರಿಮೂರ್ತಿಗಳ ಐಕ್ಯ, ಹರಿಹರರಲ್ಲಿ ವಿಭೇದ ಮಾಡದಿರುವದು, ಭಕ್ತಿಯ ಪ್ರಾಧಾನ್ಯ, ಪ್ರಸಂಗೋಪಾತ್ತವಾಗಿ ಎಲ್ಲ ದೇವತೆಗಳಿಗೂ ಸರ್ವ ಶ್ರೇಷ್ಠತೆ, ವಿಷ್ಣುವಿಗೂ ಅವನ ಅವತಾರಗಳಿಗೂ ಒಂದು ಬಗೆಯ ವಿಶಿಷ್ಟ ಮಹತ್ವ–ಇವೆಲ್ಲವೂ

ಮೇಲ್ಕಾಣಿಸಿದ ಗ್ರಂಥಕಾರರಲ್ಲಿ ಸಾಮಾನ್ಯವಾಗಿ ಇವೆ. ಜೈಮಿನಿಯಲ್ಲಿ ಮತ್ತೆ ಕೆಲವು ವಿಶೇಷ ಲಕ್ಷಣಗಳು ಕಂಡುಬರುವವು. ಅದು ಯಜ್ಞಹಿಂಸೆಯನ್ನು ಪ್ರಚ್ಛನ್ನವಾಗಿ ವಿರೋಧಿಸುವದು. ಯುದ್ಧವನ್ನು ಗೌಣವನ್ನಾಗಿ ಎಣಿಸುವದು; 'ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂಬ ಗೀತಾವಚನದ ಭಾಗವತ ಮತವನ್ನು ಅದು ಸರ್ವಾತ್ಮನಾ ಸ್ವೀಕರಿಸುವದು; ಶ್ರೀಕೃಷ್ಣನನ್ನು ಮೊದಲು ಮಾಡಿಕೊಂಡು ಬಕದಾಲ್ಭ್ಯನ ವರೆಗೆ ಎಲ್ಲರೂ ಯಜ್ಞವನ್ನು ನಿಂದಿಸಿದ್ದಾರೆ. ಯಜ್ಞಸ್ವರೂಪನಾದ ಕೃಷ್ಣನೆ (ವಿಷ್ಣು) ಪಾಂಡವರಕಡೆ ಇರುವಾಗ ಬೇರೆ ಯಜ್ಞವನ್ನು ಮಾಡುವದು ಮೌಢ್ಯವೆಂದು ಪಾಂಡವರಿಗೆ ಸೋತವರು, ಸೋಲದವರು, ರಾಜರು, ಋಷಿಗಳು, ಹೆಂಗುಸರು, ಗಂಡಸರು ಜೈಮಿನಿಯ ಅಶ್ವಮೇಧದ ಉದ್ದಕ್ಕೂ ಪ್ರತಿಭಟಿಸಿದ್ದಾರೆ. ಅದೆಲ್ಲಕ್ಕೂ ಅರ್ಜುನನ ಉತ್ತರವು ಯಾವಾಗಲೂ ಇಷ್ಟೆ: "ಹರಿಯನುಳಿದಾವು ಬದುಕುವರಲ್ಲ; ಚಿತ್ತದೊಳ್ | ಭರಿತನಾಗಿಹ ನಾವಗಂ ಧರ್ಮಸೂನು ಮರೆದಿರನು | ಆ ಮುರಾರಿಯ ನಿರೂಪದಿಂ ತೊಡಗಿ ಮಾಡುವೆನೀ ಮಹಾಕ್ರತುವನು" (ಸಂಧಿ ೧೦, ಪದ್ಯ ೨೧) ಇದೆ ಅವನ ಉತ್ತರದ ಸಾರಾಂಶ. ಇಲ್ಲಿಯ ಅಶ್ವಮೇಧದ ದಿಗ್ವಿಜಯದಲ್ಲಿ ಅರ್ಜುನನು ಕ್ವಚಿತ್ತಾಗಿ ಗೆದ್ದಿದ್ದಾನೆ. ಅರ್ಜುನನನ್ನು ಪ್ರತಿಭಟಿಸುವವರೆಲ್ಲರೂ ವಿಷ್ಣುಭಕ್ತರೇ ಆಗಿದ್ದಾರೆ. ಕೃಷ್ಣನ ಪ್ರತ್ಯಕ್ಷ ಸಹಾಯವಾಗಲಿ, ಸ್ಮರಣೆಯ ಬಲವಾಗಲಿ ಪಾಂಡವರಿಗಿಲ್ಲದಿದ್ದರೆ ಅವರು ಒಂದೂ ಯುದ್ಧದಲ್ಲಿ ಗೆಲ್ಲುವಂತಿರಲಿಲ್ಲ. ಶೀಲಕ್ಕೆ ಮಾರುಹೋಗಿ ಯೌವನಾಶ್ವನು ಯುದ್ಧ ನಿಲ್ಲಿಸಿದನು. ಬುದ್ಧಿ ಪಲ್ಲಟವಾಗಿ ಅನುಸಾಲ್ವನು ಪಾಂಡವರನ್ನು ಸೇರಿದನು. ಅಗ್ನಿಯ ಉಪದೇಶದಿಂದ ನೀಲಧ್ವಜನ ವಿರೋಧ ಮಾಯವಾಯಿತು. ಕೃಷ್ಣನ ತಂತ್ರದಿಂದಲೆ ಹಂಸಧ್ವಜನು ಪಾಂಡವರಿಗೆ ವಶನಾದನು. ಬಭ್ರುವಾಹನನ ಯುದ್ಧದಲ್ಲಂತೂ ಅರ್ಜುನನು ಸತ್ತು ಉಳಿದನು. ಆಕಾಶವಾಣಿಯಿಂದ ಪ್ರಮೀಳಾರ್ಜುನೀಯ ಯುದ್ಧವು ವಿವಾಹದಲ್ಲಿ ಪರಿಣಮಿಸಿತು. ಮಯೂರಧ್ವಜ, ಚಂದ್ರಹಾಸರು ತಾವಾಗಿ ಕೃಷ್ಣಭಕ್ತಿಯಿಂದ ಪಾಂಡವರನ್ನನುಗ್ರಹಿಸಿದರು. ವೀರವರ್ಮನನ್ನು ಗೆಲ್ಲುವದು ಸಾಧ್ಯವಾದುದಲ್ಲವೆಂದು ಕೃಷ್ಣನೇ ಹೇಳಿದ್ದಾನೆ. ಅಂತೂ ಅರ್ಜುನನ ದಿಗ್ವಿಜಯವು ಪ್ರಚ್ಛನ್ನ ಪರಾಜಯಗಳ ಪರಂಪರೆಯಾಗಿ ಪಾಂಡವ ಪ್ರತಿಷ್ಠಾಪನಾಚಾರ್ಯನಾದ ಕೃಷ್ಣನ ಸಾನ್ನಿಧ್ಯದಿಂದ ಅಕಲ್ಪಿತ ವಿಜಯದಲ್ಲಿ ಪರಿಣಮಿಸಿದೆ. ಇಲ್ಲಿಯ ಯುದ್ಧಗಳಲ್ಲಿ ಪ್ರಮುಖರಾರೂ ಸತ್ತಿಲ್ಲ; ಸತ್ತರೆ ಬದುಕಿದ್ದಾರೆ; ಹಾಗಾಗದಾಗ ಅವರು ಇದ್ದು ಗೆದ್ದವರಿಗಿಂತ ಮೇಲಾಗಿದ್ದಾರೆ. ಹೆಸರು ಅಶ್ವಮೇಧವಾದರೂ ಇಲ್ಲಿ ಆದ ಹವನವು ಕಪ್ಪುರದ್ದು. "ನಳಿನಾಂಬಕನ ಕರದೊಳಧ್ವರದ ಸುಕೃತಮಂ ಕೊಟ್ಟು ತನ್ನವಂಶ

ಮುಖಕೆ || ಕಳಸಮಿಡೆ ಮೂಜಗಂ ಕೊಂಡಾಡ | ಉಳಿದ ಯೂಪಂಗಳೊಳ್ ಕಟ್ಟಿರ್ದ ಪಶುಗಳಂ ಕಳೆದೆಲ್ಲಮಂ" (ಸಂಧಿ ೩೪, ಪದ್ಯ ೩೨) ಬಿಟ್ಟುಕೊಟ್ಟಿದೆ ಈ ಮೇಧದ ವೈಶಿಷ್ಟ್ಯ. ಯುದ್ಧವಿದ್ದರೂ ಮರಣವಿಲ್ಲ, ಹವನವಿದ್ದೂ ಹನನವಿಲ್ಲ, ಗೆದ್ದವರೆ ಸೋತಿದ್ದಾರೆ, ಸೋತವರೆ ಗೆದ್ದಿದ್ದಾರೆ. ಇಂಥ ವಿಚಿತ್ರ ಭಾಗವತ ಸೃಷ್ಟಿಯು ಈ ಅಶ್ವಮೇಧದ ಕಥಾಪ್ರಪಂಚದಲ್ಲಿ ಕಂಡುಬರುವದು. ಇದೇ ಇದರ ಜೀವಾಳ. ಇದಕ್ಕೆಲ್ಲ ಕಾರಣವೇನೆಂದರೆ ಕೃಷ್ಣಭಕ್ತಿ, ಕೃಷ್ಣತಂತ್ರ. ಇದೇ ಈ ಕಾವ್ಯದ ಮತ. ಉಳಿದ ಮತವು ಇಲ್ಲಿ ಅಡಗಿಹೋಗಿದೆ. ಲಕ್ಷ್ಮೀಶನ ಮತವು ಅದ್ವೈತಾನುಕೂಲವೆಂದು ೧೩ ನೆಯ ಸಂಧಿಯ ೨೮ ನೆಯ ಪದ್ಯದೊಳಗಿನ "ಜೀಯ ನಿನ್ನೊಳಗೀ ಸಮಸ್ತಮಧ್ಯಸ್ತಮಾಗಿದೆ, ನೀನೆ ಸತ್ಯರೂಪ" ಎಂಬ ಸಾಲನ್ನು ಪಂಡಿತ ಪೂಜಾರವರು ತಮ್ಮೊಂದು ಪ್ರಬಂಧದಲ್ಲಿ ಬಹಳ ವರುಷಗಳ ಹಿಂದೆ ಸೂಚಿಸಿದ್ದರು. ('ಅಧ್ಯಸ್ತ' ಎಂಬ ಪರಿಭಾಷಿಕ ಶಬ್ದವು ಶಾಂಕರಾದ್ವೈತ ವೇದಾಂತಕ್ಕೆ ಮೀಸಲಾಗಿದೆ.) ಆದರೆ ಕಡಬದ ನಂಜುಂಡ ಶಾಸ್ತ್ರಿಗಳಿಂದ ಸಂಪಾದಿತವಾದ ಜೈಮಿನಿಭಾರತಕ್ಕೆ ಅವರೇ ಬರೆದ ಉಪೋದ್ಘಾತದ ೧೮ ನೆಯ ಪುಟದಲ್ಲಿ "ಈ ಪದ್ಯವು ಓಲೆಯ ಪ್ರತಿಗಳಲ್ಲಿಲ್ಲ. ಅದ್ವೈತ ಪ್ರತಿಪಾದಕರು ಯಾರೊ ಈಚೆಗೆ ಸೇರಿಸಿರಬೇಕೆಂದು ತೋರುವದು" ಎಂದು ಬರೆದಿದ್ದಾರೆ. ನಾವು ಈ ಸಂಗ್ರಹಕ್ಕಾಗಿ ಉಪಯೋಗಿಸಿದ ಒಂದೂ ಓಲೆಯ ಪ್ರತಿಯಲ್ಲಿಯೂ ಯಾವ ಕಾಗದದ ಪ್ರತಿಯಲ್ಲಿಯೂ ಈ ಪದ್ಯವು ಇಲ್ಲ. ನಾವು ನೋಡಿದಮಟ್ಟಿಗೆ ಸಿದ್ಧಾಂತಿ ಸುಬ್ರಹ್ಮಣ್ಯ ಶಾಸ್ತ್ರಿಗಳ ೧೮೭೩-೧೮೮೮ ರ ಪ್ರತಿಯಲ್ಲಿ ಇದು ಮೊದಲು ಕಂಡುಬರುವದು. ಸುಮಾರು ಅದೇ ಕಾಲಕ್ಕೆ ಧಾರವಾಡ ಪ್ರಾಂತ್ಯದಲ್ಲಿ ಪ್ರಕಟವಾದ ಶಿಲಾ ಮುದ್ರಣಾಲಯಗಳಲ್ಲಿ ಮುದ್ರಿತವಾದ ಪ್ರತಿಗಳಲ್ಲಿಯೂ ಈ ಪದ್ಯವಿಲ್ಲ. ೩೪ ನೆಯ ಸಂಧಿಯ ೧೩ ನೆಯ ಪದ್ಯದಲ್ಲಿ ಬರುವ "ಹಯಮುಪರಿಲೋಕದೊಳಶ್ವಪದವಿಯಂ ತಾನೊಲ್ಲೆನುಪಮೆಗೈದದ ಕೃಷ್ಣಸಾಯುಜ್ಯಮಂ ಪಡೆವೆ." ಎಂದ ಅಶ್ವಮೇಧೀಯ ತುರಂಗದ ಮಾತು ಮಾಧ್ವಮತಕ್ಕೆ ವಿಪರೀತವಾಗಿದೆಯೆಂದು ತೋರುವದು. ಇನ್ನುಳಿಯಿತು ವಿಶಿಷ್ಟಾದ್ವೈತ. "ತಲಕಾಡಿನ ಭಾಗವತ ಮಠದವರ ಪ್ರಮಾಣ ಗ್ರಂಥವಾದ ಶುಕಭಾಷ್ಯವು ವಿಶಿಷ್ಟಾದ್ವೈತಪರವಾಗಿ ಹರಿಪಾರಮ್ಯತೆಯನ್ನು ಅಂಗೀಕರಿಸುವದು." ಎಂದೂ "ಕುಮಾರವ್ಯಾಸನು .... .... ಶ್ರೀವೈಷ್ಣವ ಸಂಪ್ರದಾಯವನ್ನವಲಂಬಿಸಿದ ಹರಿಹರ ಭಾಗವತನೆಂದಾಗಲಿ ಭೇದಾಭೇದವಾದದ ಭಾಗವತನೆಂದಾಗಲಿ ಹೇಳಬೇಕಾಗುವದು" ಎಂದೂ ಕುಮಾರವ್ಯಾಸನ ಮತಧರ್ಮವನ್ನು ಕುರಿತ ತಮ್ಮ ಲೇಖನದಲ್ಲಿ ಶ್ರೀ. ಮ. ಅ. ದೊರೆಸ್ವಾಮಿಯ್ಯಂಗಾರರು ಬರೆದಿದ್ದಾರೆ. ("ಕುಮಾರವ್ಯಾಸ ಪ್ರಶಸ್ತಿ" ಪುಟ ೭೮.) ಈ ಮಾತಿನ ಜೊತೆಗೆ

ಪೀಠಿಕಾ ಸಂಧಿಯ ೫ ನೆಯ ಪದ್ಯದಲ್ಲಿ ಬರುವ "ವರಯತಿಗೆ ಭಂಗಮಂ ತಾರದೆ" ಎಂಬಲ್ಲಿ ಶ್ಲೇಷೆಯಿಂದ ಯತಿರಾಜ ರಾಮಾನುಜರನ್ನು ಸೂಚಿಸಿರಬಹುದೋ ಏನೋ ಎಂಬ ಮಾತನ್ನೂ ೨೯ ನೆಯ ಸಂಧಿಯ ೧೪ ನೆಯ ಪದ್ಯದಲ್ಲಿ ಬರುವ "ಸಲೆ ಕೀರ್ತಿಯಿಂ ಪುಂಡರೀಕನಾಗಿರುತಿಹಂ'' [ಪುಂಡರೀಕನ ಹೆಸರು ಸಂಸ್ಕೃತ ಜೈಮಿನಿ ಅಶ್ವಮೇಧದಲ್ಲಿ ಈ ಪ್ರಸಂಗದಲ್ಲಿ ಬಂದಿಲ್ಲ. ಇದು ಲಕ್ಷ್ಮೀಶನ ಕೈಗಂಟು. ಈ ಪುಂಡರೀಕನು ಪಂಢರಪುರ ವಿಠ್ಠಲನ ಪ್ರಖ್ಯಾತ ಭಕ್ತನಾದ ಪುಂಡಲೀಕನೆ ಆಗಿರಬಹುದೋ ಏನು? ಈ ಪುಂಡರೀಕನ ವಿಶಿಷ್ಟ ಲಕ್ಷಣವು ಕೀರ್ತಿ ಎಂದು ಲಕ್ಷ್ಮೀಶನು ಹೇಳುವನು. ಕೀರ್ತಿಯೆಂದರೆ ಕೀರ್ತನೆ, ಭಜನೆ ಎಂದು ತೋರುವದು. ಹಾಗಿದ್ದಪಕ್ಷಕ್ಕೆ ಮಹಾರಾಷ್ಟ್ರದ ಪುಂಡಲೀಕನ ಕೀರ್ತಿಯು ಕರ್ನಾಟಕವನ್ನು ಸೇರುವ ಕಾಲ ಎಂದರೆ ಪುರಂದರಾದಿ ವೈಷ್ಣವದಾಸರ ಕಾಲವೇ ಲಕ್ಷ್ಮೀಶನದಾಗಿರಲು ಸಾಕು. ಪುರಂದರದಾಸರು ಶ್ರೀಕೃಷ್ಣರಾಯನ ಕಾಲದವರೆ. ಆದರೆ ಪುಂಡರೀಕನ ಹೆಸರನ್ನು ಚೌಂಡರಸ ಕವಿಯೂ ಹೇಳುತ್ತಾನೆ. ವಾದಿರಾಜರೂ ಹೇಳುತ್ತಾರೆ, ಕನಕದಾಸರಲ್ಲಿ ಅದು ಬರುತ್ತದೆ.] ಎಂಬ ಈ ಸಾಲಿನಲ್ಲಿ ಇರುವ 'ಪುಂಡರೀಕ'ವು ರಾಮಾನುಜರ ಪ್ರಾಚೀನ ಪರಂಪರೆಯಲ್ಲಿಯೂ, ಮೇಲುಕೋಟೆಯ ಜ್ಞಾನಾಶ್ವತ್ಥಕ್ಕೆ ಸಂಬಂಧಿಸಿ ಬರುವ ಮುನಿವೃಂದದಲ್ಲಿಯೂ ಬರುವನೆಂಬ ಸಂಗತಿಯನ್ನು ಒಟ್ಟುಗೂಡಿಸಿ ವಿಚಾರಿಸಿದರೆ ಲಕ್ಷ್ಮೀಶನು ಶ್ರೀವೈಷ್ಣವನಾಗಿರುವದು ಹೆಚ್ಚು ಸಂಭವನೀಯ ಎಂದು ತೋರದಿರಲಾರದು. ಹೀಗಿದ್ದರೂ ಆವನ ವಿಶಿಷ್ಟಾದ್ವೈತಮತಕ್ಕಿಂತ ಜೈ. ಅ.ದ ವಿಶಿಷ್ಟ ಭಾಗವತಮತವೇ ಕವಿಯ ಮತವೆಂಬಂತೆ ಕಾವ್ಯದ ಜೀವಾಳವಾಗಿ ಎಲ್ಲಲ್ಲೂ ಸುಳಿದಾಡಿದೆ. ಅದೇ ಕವಿಮತವೆಂದರೂ ತಪ್ಪಿಲ್ಲ.

---

## ೨. ಲಕ್ಷ್ಮೀಶನ ಕಾವ್ಯಗುಣ.

ಅಂತೂ ಕವಿಯು ದೇವನೂರಿನವನೂ, ವಿಜಯನಗರದ ಕೃಷ್ಣದೇವರಾಯನ ಕಾಲದವನೂ ಶ್ರೀವೈಷ್ಣವಮತಕ್ಕೆ ಅವಿರೋಧವಾದ ಹರಿಹರಾಭೇದದ ಭಾಗವತ ಸಂಪ್ರದಾಯದವನೂ ಎಂದಿಟ್ಟುಕೊಂಡರೆ ಬಾಧಕವಿಲ್ಲವೆಂದು ನಾವು ಸದ್ಯಕ್ಕೆ ಹಿಡಿದು ಸಾಗಬಹುದು. ಆದರೆ ಲಕ್ಷ್ಮೀಶನ ಕಾವ್ಯದ ಸೊಗಸು ಅವನ ದೇಶ, ಕಾಲ, ಮತಗಳನ್ನು ಮೀರಿ ನಿಂತಿದೆ. ಆದರಿಂದ ಅದು ಸಂಕೋಚಗೊಂಡಿಲ್ಲ. ನಿಜವಾದ ಕವಿಯ ಯಾವ ಕಾವ್ಯವೂ ಹೀಗೆಯೆ ಇರತಕ್ಕುದು. ಕಾವ್ಯವಸ್ತು, ಕಾವ್ಯನಾಯಕ, ಕಾವ್ಯರಸಗಳಿಂದಲೇ ನಿಜವಾದ ಆನಂದಲಾಭವಾಗುವದು. ದೇಶ-ಕಾಲ-ಮತ ಪರಿ

ಜ್ಞಾನವು ಕಾವ್ಯಾನಂದದಲ್ಲಿ ಗೌಣವಾದ ವಿಷಯವು. ಆದ್ದರಿಂದ ಲಕ್ಷ್ಮೀಶನ ಕಾವ್ಯ ಗುಣವನ್ನೇ ಕುರಿತು ನಾವು ಹೆಚ್ಚಾಗಿ ಪರಿಶೀಲಿಸುವದು ಉಚಿತವಾಗಿದೆ.

ಪುರಾಣ–ಕಾವ್ಯ:-ಲಕ್ಷ್ಮೀಶನ ಕಾವ್ಯದ ಗುಣಗಳನ್ನು ಕುರಿತು ವಿಮರ್ಶೆ ಮಾಡುವ ಪೂರ್ವದಲ್ಲಿ ಅವನು ಸಂಸ್ಕೃತ ಜೈಮಿನಿಯ ಅಶ್ವಮೇಧವನ್ನು ತನ್ನ ಕಾವ್ಯದ ಹದಕ್ಕೆ ಹೇಗೆ ತಿರುಗಿಸಿಕೊಂಡಿರುವನೆಂಬುದನ್ನು ಅರಿತುಕೊಳ್ಳಬೇಕು. ಸಂಸ್ಕೃತ ಅಶ್ವಮೇಧಪರ್ವವೊ ಒಂದು ಪುರಾಣ, ಲಕ್ಷ್ಮೀಶನದು ಕಾವ್ಯ. ಈ ಒಂದೇ ಭೇದದಿಂದ ಲಕ್ಷ್ಮೀಶನ ಕೃತಿಯಲ್ಲಿ ಎಷ್ಟೋ ವ್ಯತ್ಯಾಸವು ಕಂಡು ಬರುವದು. ಪೌರಾಣಿಕ ಶೈಥಿಲ್ಯವು, ನೀತ್ಯುಪದೇಶದ ಆವೇಶವು, ಭಾಷಾ ಶೈಲಿಯ ಸಾಮಾನ್ಯತ್ವವು ಲಕ್ಷ್ಮೀಶನ ಕೃತಿಯಲ್ಲಿಲ್ಲ. ಸಂಸ್ಕೃತ ಜೈಮಿನಿಯಲ್ಲಿ ಕಥೆಯ ಕೌತುಕವಿದೆ. ಉಕ್ತಿ ಚಮತ್ಕಾರವಿದೆ. ಭಕ್ತಿಯ ಆವೇಶವಿದೆ. ಈ ಗುಣಗಳನ್ನು ಲಕ್ಷ್ಮೀಶನು ಅಂಗೀಕರಿಸಿರುವನಲ್ಲದೆ ತನ್ನ ರಸಪರವಶತೆಯನ್ನೂ, ಚತುರಪದಗತಿಯನ್ನೂ, ಷಟ್ಪದದ ಝೇಂಕೃತಿಯನ್ನೂ ತನ್ನ ಕೃತಿಗೆ ಒದಗಿಸಿದ್ದಾನೆ. ಸಂಸ್ಕೃತ ಜೈಮಿನಿಯಲ್ಲಿ ಕಂಡು ಬರುವ ವೈಷ್ಣವಮತಾತಿರೇಕವು ಔಚಿತ್ಯವರಿತು ಲಕ್ಷ್ಮೀಶನ ಕಾವ್ಯಾಂಗದಲ್ಲಿ ಹುದುಗಿ ಬಂದಿದೆ. ಲಕ್ಷ್ಮೀಶನು ತನಗೆ ಬೇಕಾದಲ್ಲಿ ಮೂಲದ ವಸ್ತುವನ್ನು ಸಂಗ್ರಹಿಸಿದ್ದಾನೆ. ಅಶ್ವಮೇಧದ ಕೊನೆಯ ನಕುಲೋಪಾಖ್ಯಾನವನ್ನು ಬಿಟ್ಟಿದ್ದಾನೆ. ಉಪದೇಶವನ್ನು ಸಂಗ್ರಹಿಸಿದ್ದಾನೆ. ಅನುಸಾಲ್ವಾಖ್ಯಾನದಲ್ಲಿ, ಯೌವನಾಶ್ವಾಖ್ಯಾನದಲ್ಲಿ ಕೆಲವು ಮಾತುಗಳನ್ನು ತೇಲಿಸಿಕೊಂಡು ಒಯ್ದಂತೆ ಅಲ್ಲಲ್ಲಿ ಅನೇಕ ಕಡೆಗೆ ಮಾಡಿದ್ದಾನೆ. ಕಾವ್ಯಧರ್ಮಕ್ಕನುಸಾರವಾಗಿ ವರ್ಣನಾ ಭಾಗಗಳನ್ನು ಒಮ್ಮೊಮ್ಮೆ ಔಚಿತ್ಯಮೀರಿಯೂ ರಸಭಾವಗಳ ಭಾಗಗಳನ್ನು ಬಹುತರವಾಗಿ ಯುಕ್ತವಾಗಿಯೂ ಹಿಗ್ಗಿಸಿದ್ದಾನೆ. ಮೂಲ ಕಥೆಗಳ ಸ್ವಾರಸ್ಯ ಕೆಡದಂತೆ ಅಭಿಪ್ರಾಯ ಸ್ವಾತಂತ್ರ್ಯವನ್ನು ಎಲ್ಲೆಲ್ಲಿಯೂ ವಹಿಸಿದ್ದಾನೆ. ಹೀಗೆ ಮೂಲ ಕಥೆಯ ಮೈಯ್‌ಗೆಡಲೀಯದೆ ನವರಸರುಚಿರವಾಗಿ ಲಕ್ಷ್ಮೀಶನು ತನ್ನ ಕಾವ್ಯವನ್ನು ವಿಸ್ತರಿಸಿದ್ದಾನೆ.

**ಕಥೆಯ ಪರಂಪರೆ:—** ಜೈಮಿನಿಯ ಅಶ್ವಮೇಧಿಕ ಪರ್ವದೊಳಗಿನ ಕಥೆಗಳ ವಾಸ್ತು ರಚನೆಯು ದಾಕ್ಷಿಣಾತ್ಯ ಅದ್ಭುತ ರಮ್ಯ ಕಥೆಗಳ ಪರಂಪರೆಯನ್ನೆ ಹಿಡಿದಿದೆ. ಇಂಥ ಕಥೆಗಳಿಗೆ ಗುಣಾಢ್ಯನ ಬೃಹತ್ಕಥೆಯು ತಾಯಿ. ಈ ಕಥಾ ಜಾತಿಯಲ್ಲಿ ಕಥೆಯ ಹೊಟ್ಟೆಯೊಳಗೆ ಒಂದು ಉಪಕಥೆಯನ್ನು, ಆ ಉಪಕಥೆಯಲ್ಲಿ ಒಂದು ಅಡ್ಡ ಕಥೆಯನ್ನು, ಆ ಅಡ್ಡ ಕಥೆಯಲ್ಲಿ ಒಂದು ಕಿರುಗತೆಯನ್ನು–ಹೀಗೆ ಕಥೆಗಳ

ಒಂದು ಅಡಕಲವನ್ನೇ ಏರಿಸಿ ಇಳಿಸುವದುಂಟು. ವೈಶಂಪಾಯನಶಿಷ್ಯನಾದ ಜೈಮಿನಿಯು ಜನಮೇಜಯರಾಜನಿಗೆ ಅಶ್ವಮೇಧದ ಈ ಕಥೆಯನ್ನು ಹೇಳಿದಂತೆ ಕಥೆಯ ಮೇಲ್ಗಟ್ಟು ಇರುವದು. ಆದರೆ ಒಳಗಿನ ಉಪಾಖ್ಯಾನ, ಅಡ್ಡಕಥೆಗಳನ್ನು ಬೇರೆಬೇರೆ ಜನರು ಹೇಳಿದ್ದಾರೆ. ಉದಾ:- ಚಂದ್ರಹಾಸನ ಕಥೆಯನ್ನು ನಾರದನು ಹೇಳಿದ್ದಾನೆ. ಚಂಡಿಯ ಕಥೆಯನ್ನು ಸೌಭರಿಯು ಹೇಳಿದ್ದಾನೆ.

ಅದ್ಭುತ ರಮ್ಯ ಕಥೆಗಳಿಗೆ ಬೇಕಾಗುವ ನವರಸರುಚಿಗಳ ಹದವು ಈ ಪರ್ವದುದ್ದಕ್ಕೂ ಇದೆ. ತರುಣರ ಶೃಂಗಾರ, ಕ್ಷಾತ್ರದ ವೀರ, ದೈವದ ರಣಕೇಳಿಯ ರೌದ್ರ ಭಯಾನಕ, ಭಕ್ತರ ಶಾಂತ, ವಾದಸಂವಾದದ ಹಾಸೋಪಹಾಸ, ಕಥಾಕೌತುಕದ ಅದ್ಭುತ, ರಣಕ್ಷೇತ್ರದ ಕರುಣ ಬೀಭತ್ಸ, ಇವೆಲ್ಲವೂ ಪ್ರತಿ ಉಪಾಖ್ಯಾನದಲ್ಲಿಯೂ ಗೊಂಚಲವಾಗಿ ಅರಳಿವೆ. ಪ್ರತಿ ಕಥೆಯು ಕುತೂಹಲದಲ್ಲಿ ಪುಷ್ಟಿಗೊಂಡು ಅಪೇಕ್ಷಿತವಾಗಿಯೋ ಅಕಲ್ಪಿತವಾಗಿಯೋ ಕೃಷ್ಣಮಹಿಮೆಯಲ್ಲಿ ಕೊನೆಗೊಳ್ಳುವದು.

---

## ೩. ಕಥಾ ಸಾರಾಂಶ.

ಜೈ. ಅಶ್ವಮೇಧದ ಕಥೆಗಳು ಜನರಲ್ಲಿ ನೆಲೆಯೂರಿರುವದರಿಂದ ಅವುಗಳ ಕಥಾಸರಣಿಯನ್ನು ಸಂಗ್ರಹವಾಗಿ ಹೇಳಿದರೂ ಸಾಕು. ಮೂಲ ಕತೆಯನ್ನು ಜೈಮಿನಿಯು ಜನಮೇಜಯರಾಜನಿಗೆ ಸರ್ಪಯಾಗ ಪ್ರಸಂಗದಲ್ಲಿ ಹೇಳಿದ್ದಾಗಿದೆ. ಕಥೆ ಈ ಪ್ರಕಾರವಾಗಿದೆ:- ಜ್ಞಾತಿವಧದಿಂದ ಖಿನ್ನನಾದ ಧರ್ಮರಾಜನಿಗೆ ವ್ಯಾಸರು 'ಅಶ್ವಮೇಧ'ದ ಪ್ರಾಯಶ್ಚಿತ್ತವನ್ನು ಹೇಳುವರು. ಕುದುರೆಯನ್ನು ತರಲು ಭೀಮ ವೃಷಕೇತುಗಳು ಸಿದ್ಧರಾಗುವರು. ಪುರಾತನ ಮರುತ್ತರಾಜನ ಯಜ್ಞಾವಶಿಷ್ಟ ಧನವನ್ನು ಸಂಪಾದಿಸುವ ಯೋಚನೆಯಾಗುವದು. ಅದೇ ಹೊತ್ತಿಗೆ ಶ್ರೀಕೃಷ್ಣನು ಬಂದು ಸದ್ಯದ ರಾಜರನ್ನು ಗೆಲ್ಲುವದು ಸುಲಭವಲ್ಲ; ಅಶ್ವಮೇಧದ ಆಶೆ ಬಿಡಬೇಕು ಎಂದು ಪರಿಹಾಸವಾಗಿ ಹೇಳಿದಂತೆ ಮಾಡುತ್ತಾನೆ. ಧರ್ಮರಾಜನು "ನಿನ್ನ ಕಾರುಣ್ಯವಿದ್ದರೆ ನಾವು ಗೆದ್ದೇವು. ಅಶ್ವಮೇಧವನ್ನು ನಡೆಸಿಕೊಡಬೇಕು" ಎಂದು ಕೃಷ್ಣನ ಪಾದಕ್ಕೆರಗುವನು. ಕೃಷ್ಣನು 'ಕೈಕೊಳು ನಾವಿದ್ದು ನಡೆಸುವೆವು' ಎಂದು ಅಭಯ ಕೊಡುತ್ತಾನೆ. (ಸಂ. ೨) ಭೀಮ, ವೃಷಕೇತುಗಳು ಭದ್ರಾವತಿಗೆ ಹೋಗಿ ಯೌವನಾಶ್ವನಿಂದ ಕುದುರೆಯನ್ನು ತರುವರು. ಯೌವನಾಶ್ವನು ರಣಾಂಗಣದಲ್ಲಿ ಮೂರ್ಛಿತಾಳಿದಾಗ

ವೃಷಕೇತು ಆವನಿಗೆ ಗಾಳಿ ಬೀಸುವನು. ಕರ್ಣಜನು 'ಪಗೆ ಮಾಡುವ ಕೃತ್ಯವನ್ನು ಬಿಟ್ಟು ಮಹೀಶನ ಬಳಲಿಕೆಗೆ ಉಚಿತವಾದ ಉಪಚಾರದಿಂದ ಸಮರ ಶ್ರಮವು ಪರಿಹಾರವಾಗುವಂತೆ ಸಂತಯಿಸುವನು' ಯೌವನಾಶ್ವನು ಎಚ್ಚರವಾಗಿ ನಾಚಿಗೆಗೊಂಡು, ಬಂದವರು ಪಾಂಡವರೆಂದೂ, ಅವರಿಗೆ ಶ್ರೀಕೃಷ್ಣನ ಸಹಾಯವಿದೆಯೆಂದೂ ಕೇಳಿ ತನ್ನ ಸಮಸ್ತ ವೈಭವವನ್ನೂ ಅರ್ಪಿಸುವ ಸಂಕಲ್ಪದಿಂದ ಹಸ್ತಿನಾವತಿಗೆ ಹೊರಡುವನು. ಆವನ ತಾಯಿ ಮಾತ್ರ ಚಂಡಿತನದಿಂದ ಬರುವದಿಲ್ಲ ಎನ್ನುವಳು. ಆವಳನ್ನು ಒತ್ತಾಯದಿಂದ ಒಯ್ಯುವರು. (ಸಂ. ೩, ೪) ಯೌವನಾಶ್ವನು ಹಸ್ತಿನಾವತಿಗೆ ಬಂದು ಶ್ರೀಕೃಷ್ಣನನ್ನೂ ಧರ್ಮರಾಜನನ್ನೂ ಕಂಡು ಕೃತಕೃತ್ಯನಾಗುವನು. ಇನ್ನೂ ಯಜ್ಞಾರಂಭಕ್ಕೆ ಕಾಲವಿರುವದರಿಂದ ಶ್ರೀಕೃಷ್ಣನು ದ್ವಾರಕೆಗೆ ಹೋಗುವನು. ಧರ್ಮರಾಜನು ವ್ಯಾಸರಿಂದ ಧರ್ಮೋಪದೇಶ ಹೊಂದುತ್ತ ಯಜ್ಞಕಾಲವನ್ನು ನಿರೀಕ್ಷಿಸುವನು. ಹಿಮಗಿರಿಯೊಳಗಿನ ಮರುತ್ತರಾಯನ ಅಪಾರ ಧನವನ್ನು ಹಸ್ತಿನಾವತಿಗೆ ತರಿಸುವನು (ಸಂ. ೫).

ಯಜ್ಞಕಾಲ ಸಮೀಪಿಸಲು, ದ್ವಾರಾವತಿಯಲ್ಲಿ ಪೂರ್ಣ ವೈಭವದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದ ಶ್ರೀಕೃಷ್ಣನನ್ನು ಭೀಮನು ಅಲ್ಲಿಗೆ ಹೋಗಿ ಕರೆತರುವನು. ನರಲೀಲೆಗೆ ಸರಿಯಾದ ಸಲಿಗೆಯಿಂದ ಕೃಷ್ಣನು ಭೀಮನನ್ನು ಸ್ವಾಗತಿಸಿ ಹಸ್ತಿನಾವತಿಗೆ ಸಕಲಾಪ್ತಮಿತ್ರರೊಡದೆ ಹೊರಡುವನು (ಸಂ. ೬). ಇವರು ಹಸ್ತಿನಾವತಿಗೆ ಬರುವ ಹೊತ್ತಿಗೆ ಕೃಷ್ಣನ ಪೂರ್ವ ವೈರಿಯಾದ ಸಾಲ್ವನ ತಮ್ಮ ಅನುಸಾಲ್ವನು ಕುದುರೆಯನ್ನು ಅಪಹರಿಸುವನು. ಅವನೊಡನೆ ಯುದ್ಧವಾಗುವದು. ಯುದ್ಧಾಂತ್ಯದಲ್ಲಿ ಅವನ ಬುದ್ಧಿ ಪಲ್ಲಟಿಸುವದು. ಅವನು ಕೃಷ್ಣನನ್ನು ಮೊರೆಹೊಗುವನು. ಕೃಷ್ಣನನ್ನು ದ್ವೇಷದಿಂದ ಬೈದರೂ ಕೋಟಿ ಜನ್ಮದ ದೋಷ ಹೋಗುವವಂತೆ. ಅತ್ಯಂತ ವಿರೋಧವು ನಿಧಿಧ್ಯಾಸದಂತೆ ಭಕ್ತಿಗೆ ಸಾಧಕವಾಗುವದು. ಅಂತು, ಅನುಸಾಲ್ವನು ಯಜ್ಞಾಶ್ವರಕ್ಷಣೆಗೆ ಪಾಂಡವರನ್ನು ಕೂಡಿಕೊಳ್ಳುವನು (ಸಂಧಿ ೭). ಚೈತ್ರ ಪೌರ್ಣಿಮೆಯ ದಿನ ಯಜ್ಞದೀಕ್ಷಿತನಾಗಿ ಧರ್ಮನು ಯಜ್ಞಾಶ್ವವನ್ನು ದೇಶ ಸಂಚಾರಕ್ಕೆ ಬಿಡುವನು. ಧಿಟ್ಟರಿದ್ದವರು ಅದನ್ನು ಕಟ್ಟಿ ಕಾದಾಡಬೇಕೆಂಬ ಲಿಪಿಯನ್ನು ಕುದುರೆಯ ಹಣೆಗೆ ಕಟ್ಟಿದುದಾಗಿತ್ತು. ಅಸಿಪತ್ರವ್ರತದಿಂದ ಧರ್ಮನಿದ್ದನು. ಯೌವನಾಶ್ವ, ಅನುಸಾಲ್ವ, ಸಾತ್ಯಕಿ, ಪ್ರದ್ಯುಮ್ನ, ವೃಷಕೇತು ಮೊದಲಾದ ವೀರರೊಡನೆ ಅರ್ಜುನನು ಧರ್ಮ, ಭೀಮ, ಕುಂತಿಗಳಿಗೆ ನಮಿಸಿ, ಶ್ರೀಕೃಷ್ಣನ ಪಾದಕ್ಕೆರಗಿ ಯುದ್ಧಕ್ಕೆ ಹೊರಡುವನು.

ಕುದುರೆ ಮೊದಲು ಮಾಹಿಷ್ಮತಿ ಪಟ್ಟಣಕ್ಕೆ ಬರುವದು. ಅಲ್ಲಿಯ ಅರಸನಾದ ನೀಲಧ್ವಜನ ಮಗ ಪ್ರವೀರನು ಮದನಮಂಜರಿಯೆಂಬ ತನ್ನ ಕಾಂತೆಯೊಡನೆ ಉದ್ಯಾನ ಕ್ರೀಡೆಯಲ್ಲಿರುವಾಗ ಅವನು ಕುದುರೆಯನ್ನು ಕಂಡು ಕಟ್ಟಿ ಹಾಕುವನು. ಕೂಡಲೆ ಯುದ್ಧ ಪ್ರಾರಂಭವಾಗುವದು. ನೀಲಧ್ವಜನು ಸೇನೆಸಹಿತ ಬರುವನು. ಗೆಲವು ಪಾಂಡವರಿಗೊಲಿಯುವದು. ಆದರೆ ನೀಲಧ್ವಜನು ಮನೆ ಅಳಿಯನಾದ ಅಗ್ನಿಯನ್ನು ಪ್ರಾರ್ಥಿಸಿ ಪಾಂಡವ ಬಲವನ್ನು ಸುಡಿಸುವನು. ಅರ್ಜುನನು ಕಂಗೆಟ್ಟು ಅಗ್ನಿಯನ್ನು 'ಈ ಯಜ್ಞವೂ ನಿನಗೆ ಅಲ್ಲವೆ' ಎಂದು ಮುಂತಾಗಿ ಪ್ರಾರ್ಥಿಸಲಾಗಿ ಆಗ ಅಗ್ನಿಯು 'ಹರಿಯು ಸಮೀಪದಲ್ಲಿದ್ದೂ ಈ ಯಜ್ಞವೇಕೆ ?' ಎಂದು ಗದರಿಸುವನು. 'ಅಶ್ವಮೇಧವು ಕ್ಷತ್ರಿಯರ ಸ್ವಧರ್ಮ; ಗುರುಗಳ ಆಜ್ಞೆ; ಕೃಷ್ಣನಿಗೆ ಸಂಮತ' ಎಂದು ಅರ್ಜುನನು ತಿಳಿಹೇಳಲು ಅಗ್ನಿಯೆ ನೀಲಧ್ವಜನಿಗೆ ಯುದ್ಧ ಬೇಡ ಎಂಪೆನ್ನುವನು. ಅರಸನು ಯಜ್ಞಾಶ್ವವನ್ನು ಬಿಟ್ಟುಕೊಡಬೇಕೆನ್ನುವಾಗ ಅವನ ಹೆಂಡತಿಯಾದ ಜ್ವಾಲೆಯು ಅವನನ್ನು ಹುರಿದುಂಬಿಸಿ ಮತ್ತೆ ಯುದ್ಧಕ್ಕಟ್ಟುವಳು. ಯುದ್ಧದಲ್ಲಿ ಮಗನು ಮಡಿಯುವನು. ಮೂರ್ಛಿತವಾದ ರಾಜನನ್ನು ಮನೆಗೆ ತರುವರು. ಅವನು ಜ್ವಾಲೆಯನ್ನು ಬೈದು, ಅರ್ಜುನನಿಗೆ ಕಪ್ಪಕಾಣಿಕೆಗೊಟ್ಟು, ಕುದುರೆ ಬಿಟ್ಟು, ಪಾಂಡವ ಸೈನ್ಯದೊಡನೆ ಕುದುರೆಗಾವಲಕ್ಕೆ ಹೊರಡುವನು.

ಜ್ವಾಲೆ ತನ್ನ ತಮ್ಮ ಉನ್ಮುಖನನ್ನು ಕಂಡು ತನ್ನ ವೃತ್ತಾಂತ ಹೇಳಿ ಅರ್ಜುನನ ಮರಣೋಪಾಯವನ್ನು ತಾನು ಚಿಂತಿಸುತ್ತಿರುವದಾಗಿ ತಿಳಿಸುವಳು. 'ಕೃಷ್ಣನ ಸಹಾಯವಿರುವಾಗ ಅರ್ಜುನನ ತಲೆ ಸುಮ್ಮನೆ ಬೀಳಲಾರದು. ನಿನ್ನ ಮನೆ ಕೆಡಿಸಿ, ನನ್ನ ಮನೆಯನ್ನೂ ಕೆಡಿಸಲು ಬಂದೆಯಾ, ಹೋಗು' ಎಂದು ಆಕೆಯನ್ನು ಅವನು ಮನೆಯಿಂದಟ್ಟುವನು. ಜ್ವಾಲೆಯ ಛಲ ಇಲ್ಲಿಗೆ ನಿಲ್ಲುವದಿಲ್ಲ. ಅವಳು ಹಾಗೇ ಗಂಗಾತೀರಕ್ಕೆ ಹೋಗಿ 'ಇವಳು ಮಕ್ಕಳಿಲ್ಲದ ಪಾಪಿ, ಅವಳನ್ನು ಮುಟ್ಟಲಾರೆ' ಎಂದು ಗಂಗೆಯನ್ನು ರೇಗಿಸಿ ಅರ್ಜುನನಿಗೆ ಆರು ತಿಂಗಳಲ್ಲಿ ಅವನ ಮಗನಿಂದಲೆ ಮರಣ ಬರಲಿ ಎಂದು ಶಾಪಕೊಡಿಸುವಳು. ಇಷ್ಟಕ್ಕೂ ಸಮಾಧಾನ ಹೊಂದದೆ ತಾನು ಸತ್ತು ಬಭ್ರುವಾಹನನ ಬತ್ತಳಿಕೆಯಲ್ಲಿ ಅರ್ಜುನನ ತಲೆ ಕತ್ತರಿಸುವ ಬಾಣವಾಗಬೇಕೆಂಬ ಕೊನೆಯಾಸೆಯಿಂದ ಅಗ್ನಿಪ್ರವೇಶ ಮಾಡುವಳು. ಅಂತೂ ಯಜ್ಞಾಶ್ವದೊಡನೆ ಹೊರಟ ಅರ್ಜುನನು ಮೊದಲನೆ ಸಂಗ್ರಾಮದಲ್ಲಿಯೇ ಆರು ತಿಂಗಳಲ್ಲಿ ಮರಣವಾಗಿ ಫಲಿಸಲಿರುವ ಶಾಪಕಟ್ಟಿಕೊಳ್ಳುವನು—ಜೊತೆಗೆ ಕೃಷ್ಣನು ಇಲ್ಲದ್ದರಿಂದ. ಕವಿಯಂತೆ ದೇವತೆಗಳಿಗೂ ಅರ್ಜುನ ಸಾಯುವದಿಲ್ಲೆಂಬ ಧೈರ್ಯವಿದೆ. ಅದು ಹೇಗೆಂಬ ಕುತೂಹಲ ಕಥೆ ಕೇಳುವವರಿಗೆ ಇದೆ (ಸಂ. ೯). ಮಾಹಿಷ್ಮತಿಯಿಂದ

ಹೊರಟ ಕುದುರೆಯು ಸೌಭರಿಯಾಶ್ರಮದ ಬಳಿಗೆ ಕಲ್ಲಲ್ಲಿ ಕೀಲಿಸಿ ನಿಲ್ಲುವದು. ಅರ್ಜುನನು ಮುನಿಗೆರಗಿ ಕುದುರೆ ಬಿಡಿಸಿಕೊಡಲು ಕೇಳಿಕೊಳ್ಳುವನು. 'ಜಗದಲ್ಲಿ ಕಾಯುವವರಾರು, ಕೊಲ್ಲುವವರಾರು ? ಕೃಷ್ಣನ ಗೀತೆಯು ನಿನಗೆ ಅರ್ಥವಾಗಲಿಲ್ಲವೇ ? ಮತ್ತೆ ಈ ಅಶ್ವಮೇಧ ಏಕೆ ಹೂಡಿದಿರಿ' ಎನ್ನುವನು ಸೌಭರಿ. 'ಹರಿಯನ್ನು ಬಿಟ್ಟು ನಾವಾರೂ ಇಲ್ಲ. ಅವನ ಹೇಳಿಕೆಯಿಂದಲೆ ಈ ಅಶ್ವಮೇಧ ಸಾಗಿದೆ. ಆದರೂ ನಾವು ಚಿಕ್ಕವರು, ತಾವು ದೊಡ್ಡವರು. ನಾವು ಮರೆತರೆ ತಾವು ಅರಿವುಮಾಡಿ ಕೊಡಬೇಕು' ಎಂದು ಅರ್ಜುನನು ಹೇಳುವನು. 'ಕೃಷ್ಣಸ್ಮರಣೆಮಾಡಿ ಅದನ್ನು ಮುಟ್ಟಿದರೆ ಕುದುರೆ ಮುಕ್ತವಾಗುವದು' ಎಂದು ಮುನಿ ಹೇಳುವನು. ಹಾಗೆ ಅರ್ಜುನನು ಕುದುರೆ ಬಿಡಿಸಿಕೊಂಡು ಹೊರಡುವ ಮೊದಲು ಅದು ಕಲ್ಲಾದ ರಹಸ್ಯವನ್ನು ಕೇಳುವನು, ಆಗ ಸೌಭರಿ, ಚಂಡಿ ಉದ್ದಾಲಕರ ಕತೆ ಹೇಳುವನು. ಈ ಚಂಡಿಯಿಂದಲೆ 'ಚಂಡಿತನ' ನಾಣ್ಣುಡಿಯಾಯಿತು. ತನ್ನ ಚಂಡಿತನಕ್ಕೆ ಶಪಿತಳಾಗಿ ಕಲ್ಲಾದ ಅವಳಿಗೆ ತಾಕಿ ಕುದುರೆ ಕೀಲಿಸಿತು. 'ಇನ್ನು ಮುಂದೆ ಬರುವ ಅರಸರು ಒಬ್ಬರಿಗಿಂತೊಬ್ಬರು ಪ್ರಬಲರು. ಕೃಷ್ಣನನ್ನು ಮರೆಯಬೇಡ' ಎಂದು ಎಚ್ಚರಿಸಿ ಸೌಭರಿ ಅರ್ಜುನನನ್ನು ಬೀಳ್ಕೊಡುವನು. ಕುದುರೆ ಹಂಸಧ್ವಜನ ಚಂಪಕಾವತಿಗೆ ಬರುವದು. ಕುದುರೆಯನ್ನು ಕಟ್ಟಿದರೆ ಕೃಷ್ಣದರ್ಶನವಾಗುವದೆಂಬ ನಿಶ್ಚಯದಿಂದ ಹಂಸಧ್ವಜನು ಅದನ್ನು ಕಟ್ಟಿಸುವನು. ಹಂಸಧ್ವಜನಿಗೆ ಶಂಖಲಖಿತರೆಂಬ ಪುರೋಹಿತರಿದ್ದರು. ಅವರು ನಿಯಮನಿಷ್ಠುರರಾಗಿದ್ದರು. ಯುದ್ಧಕಾಲದಲ್ಲಿ ಹಿಂದುಳಿದವರನ್ನು ಕಾಯ್ದೆಣ್ಣೆಕೊಪ್ಪರಿಗೆಯಲ್ಲಿ ಹಾಕಿಸುವ ಕಟ್ಟಳೆಮಾಡಿ ಈ ಪುರೋಹಿತರು ರಾಜನಿಂದ ಹಾಗೆ ಡಂಗುರ ಹೊಯ್ಸುವರು. ಕೃಷ್ಣದರ್ಶನದ ಉತ್ಸಾಹವು ಕೃಷ್ಣವೇಣಿಯರ ಸರಸದ ಮಾತುಗಳಲ್ಲೂ ಸೇರಿಕೊಳ್ಳುವದು. (ಸಂ. ೧೦).

ಹಂಸಧ್ವಜನ ಮಗ ಸುಧನ್ವನು ತಾಯಿ ತಂಗಿಯರ ಅನುಜ್ಞೆ, ಸ್ಫೂರ್ತಿಗಳನ್ನು ಪಡೆದು ಹೆಂಡತಿ ಪ್ರಭಾವತಿಯನ್ನು ಕಾಣುವನು. ಆಕೆ 'ತನಗೆ ಸಂತಾನವಿಲ್ಲ; ಒಂದು ರಾತ್ರಿ ಅರಮನೆಯಲ್ಲಿ ಇದ್ದು ಹೋಗಬೇಕು' ಎಂದು ಸುಧನ್ವನನ್ನು ಧರ್ಮ-ಸಂಕಟಕ್ಕೀಡುಮಾಡುವಳು. ಅವನಿಗೂ ಆಕೆಯ ಮಾತು ಸರಿಯಾಗಿ ತೋರುವದು. ರಾತ್ರಿಯನ್ನು ಕಳೆದು ಬೆಳಗಿಗೆ ಏಳುವಹೊತ್ತಿಗೆ ರಾಜಸೇವಕರು ಬಂದು ಸುಧನ್ವನನ್ನು ರಾಜಾಜ್ಞೆಯಿಂದ ಬಂಧಿಸಿ ರಾಜನಿದಿರು ತರುತ್ತಾರೆ; ನಿಯಮನಿಷ್ಠುರತೆಗೆ ರಾಜಪುತ್ರನೂ ಅಷ್ಟೇ. ದರಿದ್ರ ಪುತ್ರನೂ ಅಷ್ಟೇ! ಯಥಾಪ್ರಕಾರ ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕುತ್ತಾರೆ ಸುಧನ್ವನನ್ನು. ಅವನೋ! ನಿಶ್ಚಲ ವಿಷ್ಣುಭಕ್ತ. ವಿಷ್ಣುನಾಮಕೀರ್ತನೆಯಿಂದ ಕಾದೆಣ್ಣೆಯಲ್ಲಿ ತಂಗೊಳದಲ್ಲಿನ ರಾಜಹಂಸದಂತೆ ಸುಖ

ವಾಗಿರುತ್ತಾನೆ. ಈ ಧರ್ಮವನ್ನರಿಯದ ಪುರೋಹಿತರು ಸುಧನ್ವನು ಅಗ್ನಿಸ್ತಂಭ ಮಾಡಿರಬೇಕೆಂದು ಎಣಿಸಿ ತೆಂಗಾಯಿ ಹಾಕಿಸುತ್ತಾರೆ ಎಣ್ಣೆಯಲ್ಲಿ. ವಿಷ್ಣುಭಕ್ತನಿಗೆ ಅವೇನು ಮಾಡಬಲ್ಲವು? ಅವೇ ಸಿಡಿದು ತಿರುಗಿ ಅವರ ಹಣೆಗೆ ತಾಕುವವು. ತಲೆಗೆ ತಾಕದೆ ಬುದ್ಧಿ ಬರುವದಿಲ್ಲ ಎಂಬುದು ನಿಜ. ವಿಷ್ಣುಭಕ್ತರನ್ನು ತಾವು ಕಾಡಿದೆವಲ್ಲಾ ಎಂದು ಅವರು ಆಗ ಪರಿತಪಿಸುವರು. ಲಿಖಿತನು ತನಗೆ ಮರಣಾಂತ ಪ್ರಾಯಶ್ಚಿತ್ತವೇ ಯೋಗ್ಯವೆಂದು ಕಾದೆಣ್ಣೆಯಲ್ಲಿ ತಾನೂ ಹಾರಿಕೊಳ್ಳುವನು. ಹರಿಭಕ್ತರ ಸಹವಾಸದಲ್ಲಿದ್ದವನನ್ನು ಕಾಯ್ದ ಎಣ್ಣೆ ಏನುಮಾಡಬಲ್ಲದು? ಹಂಸಧ್ವಜನಿಗೂ ಆನಂದವಾಗುವದು. ಸುಧನ್ವನು ಯುದ್ಧಕ್ಕೆ ಹೊರಡುವನು. (ಸಂ. ೧೧).

ಅರ್ಜುನ ಸುಧನ್ವರಿಗಾದ ಕಾಳಗದ ಆಡಂಬರವನ್ನು ಹನ್ನೆರಡನೆಯ ಸಂಧಿಯನ್ನೋದಿಯೆ ತಿಳಿಯಬೇಕು. ಯುದ್ಧದ ಸೂತ್ರ ಅರ್ಜುನನ ಕೈಮೀರಿ ಹೋಯಿತು. ಸಂಕಟಬಂದಾಗಲ್ಲವೆ ವೆಂಕಟರಮಣನ ಧ್ಯಾನ! ಪುರುಷ ಪ್ರಯತ್ನವು ವಿಫಲವಾದಾಗಲೆ ದೈವಚಾಲಕನಾದ ಪರಾತ್ಪರ ಪುರುಷನ ನೆನಪಾಗುವದು. ಅರ್ಜುನನಿಗೆ ಕೃಷ್ಣನ ನೆನಪಾಗುವದು. ಅರ್ಜುನನು ಕೃಷ್ಣನನ್ನು ಜಾನಿಸುವದು ತಡವಾಯಿತಲ್ಲದೆ ಕೃಷ್ಣನು ಅರ್ಜುನನಲ್ಲಿಗೆ ಬರುವದು ತಡವಾಗಲಿಲ್ಲ. ನೆನೆದೆಣಿಕೆ ಕೈಸಾರ್ದುದೆಂದು ಸುಧನ್ವನಿಗೂ ಸಮಾಧಾನವಾಯಿತು. ಕೃಷ್ಣನ ಬರವಿನಿಂದ ಅರ್ಜುನನಿಗೆ ಅರಿವುಂಟಾಗದೆ ಮೂಲಗರ್ವವೇ ಉದ್ದೀಪಿಸಿಕೊಂಡಿತು. ತನ್ನ ಗರ್ವಸಂಭ್ರಮದಲ್ಲಿ, ಮೂರು ಬಾಣಗಳಿಂದ ಸುಧನ್ವನ ತಲೆಯನ್ನೆ ಕತ್ತರಿಸುವದಾಗಿ ಅವನು ಪ್ರತಿಜ್ಞೆ ಮಾಡಿದನು. 'ನೀನು ನನ್ನೊಳಗೆ ಆಲೋಚಿಸದೆ ನುಡಿದೆ' ಎಂದನು ಕೃಷ್ಣ. ಅರ್ಜುನನ ಮೂರು ಬಾಣಗಳನ್ನು ಕತ್ತರಿಸದಿದ್ದರೆ ತಾನು ಪಾತಕಿಯ ಗತಿಗೆ ಹೋಗಲೆಂದು ಸುಧನ್ವನು ಪ್ರತಿ ಪ್ರತಿಜ್ಞೆ ಮಾಡಿದನು. ಆಯಿತು. ಸುಧನ್ವನ ಪ್ರತಿಜ್ಞೆ ಸುಳ್ಳಾಗಲಿಲ್ಲ. ಅರ್ಜುನನ ಮೂರು ಬಾಣಗಳನ್ನು ಅವನು ಕತ್ತರಿಸಿದನು. ಇತ್ತ, ಅರ್ಜುನನ ಪ್ರತಿಜ್ಞೆಯೂ ಕೃಷ್ಣನ ಕೃಪೆಯಿಂದ ಮಾತ್ರ ನಿಜವಾಯಿತು. ಮುರಿದ ಮೂರನೆಯ ಬಾಣವೇ ಸುಧನ್ವ ತಲೆಕೊಂಡಿತು. ಆದರೆ ಅಷ್ಟರಲ್ಲಿ ಕೃಷ್ಣನ ರಾಮಾವತಾರ ಕೃಷ್ಣಾವತಾರದ ಪುಣ್ಯವೆಲ್ಲ ಬರಿದಾಯಿತು. ಸುಧನ್ವನ ಶಿರವು ಹಾರುವಾಗಲೂ ಕೃಷ್ಣನಾಮಸ್ಮರಣೆ ಮಾಡುತ್ತ ಕೃಷ್ಣನ ಪಾದಕ್ಕೆ ಉರುಳಿತು. ಕೃಷ್ಣನು ಆ ಶಿರವನ್ನು ಆಘ್ರಾಣಿಸಿ ಸುಧನ್ವನ ಆತ್ಮವನ್ನು ತನ್ನ ಜ್ಯೋತಿಯಲ್ಲಿ ಬೆರಿಸಿಕೊಂಡು ಸಾಯುಜ್ಯವನ್ನು ಕೊಟ್ಟು ಆ ಶಿರವನ್ನು ಬಿಸುಟನು. ಹಂಸಧ್ವಜನು ಮಗನ ತಲೆಯನ್ನು ಮುರಹರನು ಒಗೆದನಲ್ಲಾ ಎಂದು ಮರುಗಿದನು; ಮರಳಿ ಅದನ್ನು ಕೃಷ್ಣನ ಪಾದದತ್ತ ಒಗೆದನು. ಕೃಷ್ಣ ಅದನ್ನು ನಭಕ್ಕೆಸೆಯಲು ಶಿವನು ಅದನ್ನು ತನ್ನ ರುಂಡಮಾಲೆಯಲ್ಲಿ ಧರಿಸಿದನು. (ಸಂ. ೧೩).

ಆಮೇಲೆ ಸುರಥನು (ಸುಧನ್ವನ ತಮ್ಮ) ಅಣ್ಣನಂತೆಯೆ ಕಾದಾಡಿ ಸಾಯು ಸಾಯುವಾಗಲು ಅರ್ಜುನನನ್ನು ಮೂರ್ಛೆ ಬರುವಂತೆ ಕೆಡಹಿ ಕೃಷ್ಣನ ಚರಣದಮೇಲೆ 'ಹರಿ ರಾಘವ ಜನಾರ್ದನ ಮುಕುಂದ' ಎಂದು ತಾನುಬೀಳುವನು. ಸುರಥನ ಶಿರಕ್ಕಾಗಿ ಗರುಡ ನಂದೀಶ್ವರರೊಳಗೆ ಕಾಳಗವಾಗುವದು. ಗರುಡನು ಸುರಥನ ಶಿರವನ್ನು ಪ್ರಯಾಗದ ತ್ರಿವೇಣೀ ಸಂಗಮದಲ್ಲಿ ಎಸೆಯುವನು; ನಂದೀಶ್ವರನು ಅದನ್ನು ಎತ್ತಿ ಒಯ್ದು ಶಿವನಿಗೆ ಕೊಡಲು ಅವನು ಅದನ್ನು ತನ್ನ ರುಂಡಮಾಲೆಯಲ್ಲಿ ಧರಿಸುವನು. ಹೀಗೆ ಹರಿಹರರಿಗೆ ಸಮಾನ ಭಕ್ತರಾದ ಪುತ್ರರಿಬ್ಬರು ಕಾದಿ ಮಡಿದ ಮೇಲೆ ಕೆರಳಿದ ಹಂಸಧ್ವಜನು ಕೃಷ್ಣಾರ್ಜುನರಮೇಲೆ ಏರಿ ಹೋಗುವನು. ಆಗ ಕೃಷ್ಣನು ರಥದಿಂದಿಳಿದು ಹಂಸಧ್ವಜನಿಗೆ ದರ್ಶನ ಕೊಡುವನು. ತಿಳಿಹೇಳುವನು. ಹಂಸಧ್ವಜನು ತನ್ನ 'ಕ್ಷಾತ್ರತಾಮಸ'ವನ್ನು ಬಿಟ್ಟು ವೈಷ್ಣವಧರ್ಮವನರಿತು ಸಕಲವನ್ನು ಕೃಷ್ಣನಿಗರ್ಪಿಸಿ, ಪಾಂಡವರೊಡನೆ ಕೂಡಿಕೊಂಡು ಹೊರಡುವನು (ಸಂ. ೧೪). ಕೃಷ್ಣನು ಹಸ್ತಿನಾವತಿಗೆ ಮರಳುವನು.

ಅನಂತರ ಕುದುರೆ ಪಾರ್ವತಿಯ ಪೂರ್ವತಪಸ್ಯೆಯ ಪುಣ್ಯ ಭೂಮಿಯನ್ನು ಸೇರಿ, ಅಲ್ಲಿಯ ಕೊಳದ ನೀರು ಕುಡಿದು, ಪಾರ್ವತಿಯ ಪೂರ್ವಶಾಪದಿಂದ ಹೆಣ್ಣುದುರೆಯಾಗಲು ಅರ್ಜುನನಿಗೆ ಕೃಷ್ಣಸ್ಮರಣೆಯಿಲ್ಲದೆ ಗತಿಯಿಲ್ಲದಾಯಿತು. ಈ ಚಿಂತೆಗೆ ಪರಿಹಾರವಿಲ್ಲದಿರುವಾಗಲೆ ಆ ಕುದುರೆ ಮತ್ತೊಂದು ಕೊಳದಲ್ಲಿ ನೀರು ಕುಡಿಯಲಾಗಿ ಹೆಬ್ಬುಲಿಯಾಯಿತು. ಇದು ಆದದ್ದು ಒಬ್ಬ ಬ್ರಾಹ್ಮಣನ ಶಾಪದಿಂದ. ಈ ಅಕಸ್ಮಾತ್ತಾದ ಅದ್ಭುತವು ಅರ್ಜುನನನ್ನು ಭಯದಿಂದ ಕಂಗೆಡಿಸಿತು. ಅರ್ಜುನನು ಹರಿನಾಮಗಳನ್ನು ನಿರರ್ಗಳವಾಗಿ ನೆನೆದನು. 'ಮುರರಿಪು ಸುಹೃದ್ಭಂಗವನ್ನು ಸೈರಿಸುವನೇ ?' ಕೃಷ್ಣನ ಕೃಪೆಯಿಂದ ಕುದುರೆ ಮೊದಲಿನಂತಾಯಿತು. ಹೆಣ್ಣುಹುಲಿಯೂ ಆಗಿ ಮತ್ತೆ ಮೂಲರೂಪತಾಳಿದ ಅಶ್ವವು ಹೆಣ್ಣು ಹುಲಿಯಂತಿರುವ ಪ್ರಮೀಳೆಯ ರಾಜ್ಯವನ್ನು ಸೇರಿತು. ಇಲ್ಲಿಯ ಸ್ತ್ರೀಯರೆಲ್ಲರೂ ಜಾತಿಯಿಂದಲೆ ವಿಷಕನ್ನೆಯರು. ಪ್ರಮೀಳೆ ಅವರಿಗೆ ಅರಸಿ. ತಮ್ಮ ವೀರರೆಲ್ಲರೂ ಈ ರಾಜ್ಯದಲ್ಲಿ ಬುದ್ಧಿವಂತರಾಗಿ ವಿವೇಕದಿಂದ ನಡೆದುಕೊಳ್ಳಬೇಕೆಂದು ಅರ್ಜುನ ತನ್ನ ಸೈನ್ಯದಲ್ಲಿ ಸಾರೀಹೆಳಿಸುವನು. ವಿಗಡೆಯರೊಡನೆ ಕಾದಾಡಲು ಪಾಂಡವ ಸೈನ್ಯವು ಸಿದ್ಧವಾಯಿತು. ಪ್ರಮೀಳೆ ಅರ್ಜುನನಿಗೆ ಇದಿರಾದಳು. ಅರ್ಜುನನು ಅವಳಮೇಲೆ ಸಂಮೋಹನಾಸ್ತ್ರವನ್ನು ಬಿಡಲು ಸಿದ್ಧನಾದನು. ಅಶರೀರವಾಣಿಯೊಂದು :- 'ಈಕೆಯಕೂಡ ನೀನು ಎಷ್ಟು ದಿನ ಯುದ್ಧವಾಡಿದರೂ ತೀರದು. ಇವಳನ್ನು ಮದುವೆಯಾಗು; ಲೇಸಾಗುವದು' ಎಂದು ಎಲ್ಲಗೂ ಕೇಳುವಂತೆ ಹೇಳುವದು. ಅರ್ಜುನ ಪ್ರಮೀಳೆಯರಿಗೆ ಒಡಂಬಡಿಕೆ

ಯಾಗುವದು. "ಕನ್ನೈದಿಳೆಯ ಬಣ್ಣದ ಮುರಾರಿಯನ್ನು ಕಂಡು ನಿನ್ನ ವಿಷವಳು ತನ ಕಳೆದಮೇಲೆ ನಿನ್ನನು ಒಡಗೂಡುವೆನು" ಎಂದು ಹೇಳಿ ಅರ್ಜುನ ಪ್ರಮೀಳೆ ಯನ್ನು ಹಸ್ತಿನಾವತಿಗೆ ಕಳುಹಿಸುವನು. ಕುದುರೆಯು ಆಮೇಲೆ ವಿಸ್ಮಯಕರವಾದ ಅನೇಕ ಪ್ರದೇಶಗಳನ್ನು ದಾಟಿ, ಭೀಕರವಾದ ಭೀಷಣನ ರಾಜ್ಯವನ್ನು ಸೇರುವದು. ಭೀಷಣನು ತನ್ನ ಎಲ್ಲ ಮಾಯಾಜಾಲದಿಂದ ಅರ್ಜುನನನ್ನು ಕಾಡುವನು. ಅವನೊ ಡನೆ ಕಾದಾಡುವನು. ಕೊನೆಗೆ ತನ್ನ ಮಾಯೆಯಿಂದ ಪುಣ್ಯಾಶ್ರಮವೊಂದನ್ನು ನಿರ್ಮಿಸಿ ತಾನೇ ಮುನಿಯಾಗಿ ಬಂದು "ಈ ದಾನವರನ್ನು ಕೊಂದರೆ ಏನು ಬಂತು? ಬಲ್ಲವರಿಗೆ ಪರಹಿಂಸೆ ಲೇಸಲ್ಲ" ಎಂದು ಅಹಿಂಸೋಪದೇಶವನ್ನೂ ಮಾಡುವನು. ಅರ್ಜುನನ ಬಾಣದಿದಿರು ಮಾಯಾ ನಾಟಕ ನಿಲ್ಲಲಿಲ್ಲ. ದೈತ್ಯರು ದೆಸೆಗೆಟ್ಟರು. ಅಲ್ಲಿಯ ಸಂಪತ್ತೆಲ್ಲ ತಕ್ಕೊಂಡು ಅರ್ಜುನ ಮುಂಪೆ ಹೊರಟನು. ಕುದುರೆ ಮಣಿ ಪುರದ ಕಡೆಗೆ ಸಾಗಿತು. (ಸಂ. ೧೫, ೧೬).

ಮಣಿಪುರವನ್ನು ಸೇರಿದ ಕುದುರೆಯನ್ನು ಬಭ್ರುವಾಹನನ ಕಡೆಯವರು ಕಟ್ಟಿಹಾಕಿದರು. ಹಂಸಧ್ವಜನು "ಈತನು ಸಾಮಾನ್ಯನಲ್ಲ. ಆತನಿಗೆ ನಾವು ಕಪ್ಪ ಗಾಣಿಕೆ ಕೊಡುತ್ತೇವೆ" ಎಂದು ತಿಳಿಸಿದನು. ಬಭ್ರುವಾಹನನೂ ಮಹಾವೈಷ್ಣವ. ಚಿಂತ್ರಾಂಗದೆಯ ಮಗ, ಪಾರ್ಥನ ಪುತ್ರ. ಸುಬುದ್ಧಿ ಮೊದಲಾದ ತನ್ನ ಮಂತ್ರಿಗಳೊ ಡನೆ ವಿಚಾರಿಸಿ ಬಭ್ರುವಾಹನನು ಯುದ್ಧ ನಿಶ್ಚಯ ಮಾಡುವನು. ಇದನ್ನು ಅಂತಃ ಪುರದಲ್ಲಿದ್ದ ಚಿತ್ರಾಂಗದೆ ಕೇಳಿ "ಗುರುದ್ರೋಹ ಮಾಡಬೇಡ, ನಿನ್ನ ಸರ್ವಸ್ವವನ್ನು ನಿನ್ನ ತಂದೆಗೆ ಸಮರ್ಪಿಸು" ಎಂದು ಬುದ್ಧಿ ಹೇಳುವಳು. ಮತ್ತೆ ಬಭ್ರುವಾಹನನು ಸುಬುದ್ಧಿಯೊಡನೆ ಈ ಮಾತು ಕುರಿತು ವಿಚಾರಿಸಿ ಪಾರ್ಥನನ್ನು ಸ್ವಾಗತಿಸಿ ಕಪ್ಪ ಕಾಣಿಕೆ ಸಲ್ಲಿಸುವ ಯೋಚನೆ ಮಾಡುವನು.

ಮರುದಿನ ಬೆಳಗು ಪಾರ್ಥನಿದ್ದಲ್ಲಿಗೆ ಬಂದು ಬಭ್ರುವಾಹನನು ಶಿರಬಾಗಿ ತನ್ನ ವೃತ್ತಾಂತ ಹೇಳಿದನು. ಅರ್ಜುನನು ಬಭ್ರುವಾಹನನ ಮುಖವನ್ನೂ ನೋಡದೆ ನಿಂತು ಬಿಟ್ಟನು. ಹಂಸಧ್ವಜಾದಿಗಳಿಗೆ ಆಶ್ಚರ್ಯವಾಯಿತು. "ನೀನು ಹೇಡಿ, ಚಿತ್ರಾಂ ಗದೆಗೆ ನೀನು ಯಾವುದೋ ವೈಶ್ಯನಿಗೆ ಹುಟ್ಟಿರಬೇಕು. ಅವಳೇನು ನರ್ತಕಿ!" ಎಂದು ಅರ್ಜುನನು ಅವಿವೇಕದ ಮಾತುಗಳಿಂದ ಬಭ್ರುವಾಹನನ್ನು ಧಿಃಕರಿಸುವನು. ಬಭ್ರು ವಾಹನನೂ "ನನ್ನ ತಾಯಿಯನ್ನು ದೂಷಿಸಿದೆಯಲ್ಲವೇ? ನಿನ್ನ ತಲೆ ಕೆಡಹಿದರೆ ಹೌ ದೆನ್ನು" ಎಂದು ಕಪ್ಪಕಾಣಿಕೆ ಹಿಂದೆ ಕಳುಹಿ ಯುದ್ಧಕ್ಕೆ ಅಣಿಯಾಗುವನು. ಈ ತಂದೆ ಮಕ್ಕಳ ಯುದ್ಧವು ಇಂದ್ರಾರ್ಜುನರ ಕದನದಂತೆ, ರಾಮನೊಡನೆ

ಅಶ್ವಮೇಧ ಪ್ರಸಂಗದಲ್ಲಿ ಲವಕುಶರೊಡನಾದ ಕಾಳಗದಂತೆಯೂ ರೋಮಾಂಚಕಾರಿ ಯಾಗುವದು. ಈ ನೆಪದಿಂದ ಇಲ್ಲಿ ಕೃಷ್ಣನ ಪೂರ್ವಾವತಾರವಾದ ರಾಮಚಂದ್ರನ ಚರಿತ್ರೆಯು ಸಂಗ್ರಹವಾಗಿ ಬರುವದಲ್ಲದೆ, ಉತ್ತರ ರಾಮಚರಿತ್ರವು ವಿಸ್ತಾರವಾಗಿ ಬರುವದು. (ಸಂ. ೧೭).

ಹತ್ತು ಪದ್ಯಗಳಲ್ಲಿ ಷಟ್ಕಾಂಡ ರಾಮಾಯಣವು ಬಂದು ಹೋಗುವದು. ರಾಮರಾಜ್ಯದ ಮನೋಹರ ವರ್ಣನೆಮಾಡಿ, ರಾಮನ ದಿಗಂತ ವಿಶ್ರಾಂತ ಕೀರ್ತಿಗೆ ಅಪಕೀರ್ತಿಯ ಕಲಂಕದ ಆಸೆಯಾಯಿತೇನೋ ಎಂದು ಉತ್ಪ್ರೇಕ್ಷಿಸಿ ಕವಿಯು ಸೀತಾಪರಿತ್ಯಾಗದ ಸಂದರ್ಭವನ್ನು ವರ್ಣಿಸುವನು. ಸೀತಾರಾಮಚಂದ್ರರಿಗೆ ಪಟ್ಟಾಭಿಷೇಕವಾದ ಮೇಲೆ ಮಕ್ಕಳಿಲ್ಲವಲ್ಲಾ ಎಂಬ ಚಿಂತೆಯಾಯಿತು. ಚಿಂತೆ ಪರಿಹಾರ ವಾಗಿ ಸೀತೆ ಬೇಗನೆ ಗರ್ಭವತಿಯಾದಳು. ಸೀತೆಗೆ ಮತ್ತೆ ಆಶ್ರಮಗಳಲ್ಲಿರುವ ಬಯಕೆ ಯಾಯಿತು. ರಾಮಚಂದ್ರನೂ ಆಕ್ಷೇಪದಿಂದ ಅದಕ್ಕೆ ಸಮ್ಮತಿಗೊಟ್ಟನು. ಅದೇ ಕಾಲಕ್ಕೆ ರಾಮನಿಗೆ ಸೀತೆಯನ್ನು ಅಡವಿಪಾಲುಮಾಡಿದಂತೆ ಕನಸಾಗುವದು. ವಸಿಷ್ಠರು ಅದಕ್ಕೆ ಶಾಂತಿಯನ್ನೂ ಮಾಡುವರು. ಮುಂದೆ ಎರಡು ಮೂರು ದಿನಗಳ ನಂತರ ರಾಮಚಂದ್ರನು ರಾತ್ರಿಯ ಚಾರರನ್ನು ತನ್ನ ಆಡಳಿತದಬಗ್ಗೆ ಜನವಾರ್ತೆ ಯೇನೆಂದು ಕೇಳುವಾಗ ಒಬ್ಬನು ರಾಮನ ಒತ್ತಾಯಕ್ಕೆ – ಅಗಸನೊಬ್ಬನು, ಮನೆ ಬಿಟ್ಟು ಹೋದ ಹೆಂಡತಿ ಮರಳಿ ಬಂದಿರಲಾಗಿ, 'ಅಗಲಿದ ಹೆಂಡತಿಯನ್ನು ಆಳಲಿಕ್ಕೆ ನಾನು ರಘುನಾಥನಲ್ಲ' ಎಂದು–ಆಡಿದ ಮಾತನ್ನು ಹೇಳುವನು. ರಘುಕುಲಕ್ಕೇ ಅಪಕೀರ್ತಿ ಬಂದಿತಲ್ಲಾ ಎಂದು ರಾಮಚಂದ್ರ ಮಿಡುಕುವನು. ತಮ್ಮಂದಿರೊಡನೆ ಯೋಚಿಸುವನು. ಸೀತಾತ್ಯಾಗದ ತನ್ನ ನಿಶ್ಚಯ ತಿಳಿಸುವನು. ತಮ್ಮಂದಿರೊಬ್ಬರೂ ಅದಕ್ಕೆ ಒಪ್ಪುವದಿಲ್ಲ. ಲಕ್ಷ್ಮಣನಿಗೆ ಗತಿಯಿಲ್ಲ. ರಾಘವೇಂದ್ರನ ಮಾತು ಒಪ್ಪಿಕೊಂಡು ಲಕ್ಷ್ಮಣ ಅತ್ತಿಗೆಯನ್ನು ಮರುದಿನ ಆಶ್ರಮದ ಕಡೆಯ ಅಡವಿಯತ್ತ ಅಟ್ಟಲು ಸಿದ್ಧನಾಗುವನು. ಸೀತೆಗೆ ಸಂಭ್ರಮವೋ ಸಂಭ್ರಮ! ಎಷ್ಟು ಬೇಗ ತನ್ನ ಪತಿ ತನ್ನನ್ನು ಆಶ್ರಮಕ್ಕೆ ಕಳಹುವ ವ್ಯವಸ್ಥೆಮಾಡಿದನಲ್ಲಾ ಎಂದು ಸೀತೆ ಲಕ್ಷ್ಮಣನೊಡನೆ ಹೊರಟಳು. ಗಂಗೆಯನ್ನು ದಾಟಿದರು. ಸೀತೆಗೆ ತಿಳಿಯದಾಯಿತು ತಾನು ಬಂದುದು ಆಶ್ರಮಕ್ಕೊ ಅಡವಿಗೋ ಎಂಬುದು. ಲಕ್ಷ್ಮಣನು ಇದ್ದ ಸಂಗತಿ ತಿಳಿಸಿಬಿಡುವನು. ಇಲ್ಲಿಯ ಸೀತಾಲಕ್ಷ್ಮಣರ ಸ್ಥಿತಿಯನ್ನು ವರ್ಣಿಸುವ ಪದ್ಯಗಳಷ್ಟೇ ಕೂಡ ಯಾವ ಕವಿಗೂ ಅಮರ ಕೀರ್ತಿಯನ್ನು ತರುವಂತಿವೆ. ಲಕ್ಷ್ಮಣ ವನದೇವತೆಗಳ ಕಾವಲಿಟ್ಟು ಸೀತೆಯನ್ನು ಬಿಟ್ಟು ಹೊರಡುವನು. 'ಹೌದು, ರಾಮಚಂದ್ರ ಏಕಾಕಿ. ಅವನಿಗೆ ಜೊತೆ

ಯಾರು ? ಹೋಗು ಲಕ್ಷ್ಮಣಾ' ಎಂದು ಸೀತೆ ಅವನನ್ನು ಕಳುಹುವಳು; ಅವನು ಕಾಣದಾಗುತ್ತಲೆ ಚರಾಚರವೆಲ್ಲ ಕರಗಿ ನೀರಾಗುವಂತೆ ಶೋಕಿಸುವಳು. ಪಶುಪಕ್ಷಿಗಳೂ ಅವಳನ್ನುಪಚರಿಸುವವು. ಅಲ್ಲಿಗೆ ವಾಲ್ಮೀಕಿಗಳು ಬರುವರು. 'ಬಹಳ ಶೋಕದೊಳಗಿದ್ದವರನ್ನು ಕಂಡು ಸುಮ್ಮನೆ ಹೋಗುವವನು ತಾನಲ್ಲ. ತಾನು ವಾಲ್ಮೀಕಿ' ಎಂದು ಗುರುತುಕೊಟ್ಟು ಅಭಯ ಹೇಳುವನು. ಸೀತೆ ತನ್ನ ಬಯಕೆಯಂತೆಯೆ ಅನಿರೀಕ್ಷಿತವಾಗಿ ಆಶ್ರಮ ಸೇರುವಳು. ಕುಶಲವರನ್ನು ಹಡೆಯುವಳು. ಮಕ್ಕಳು ಬಾಲಲೀಲೆಗಳಿಂದ ವಾಲ್ಮೀಕಿಮುನಿಗೂ ಸೀತೆಗೂ ಆನಂದ ಕೊಡುವರು. ದೊಡ್ಡವರಾಗಿ, ಉಪನಯನಹೊಂದಿ, ಧನುರ್ವೇದಸಹಿತ ಸಕಲ ವೇದಶಾಸ್ತ್ರಗಳನ್ನು ಕಲಿತು, ರಾಮಾಯಣವನ್ನು ಹಾಡಿ ಹೇಳಬಲ್ಲವರಾಗುವರು. (ಸಂ. ೨೦).

ಇತ್ತ ರಾಮಚಂದ್ರನಿಗೆ ಸುಖವಿಲ್ಲ. ರಾವಣವಧೆಯಿಂದ ಬ್ರಹ್ಮಹತ್ಯಾದೋಷ ಬಂದಿತಲ್ಲಾ ! ಇದಕ್ಕೇನು ಪ್ರಾಯಶ್ಚಿತ್ತ ಎಂದು ಅವನಿಗೆ ಚಿಂತೆ ಬೇರೆ. ಶಾಸ್ತ್ರಗಳು ಅಶ್ವಮೇಧವನ್ನು ಉಪಾಯ ಎಂದು ಹೇಳುವದುಂಟು. ವಸಿಷ್ಠಾದಿಗಳನ್ನು ಕೇಳಲು ಅವರು "ಮೇಧವೇನೋ ಆಗಬಹುದು; ಆದರೆ ಹೆಂಡತಿಯಿಲ್ಲದೆ ಧರ್ಮಕೃತ್ಯ ಸಾಗುವದೆಂತು ?" ಎಂದು ಪ್ರಶ್ನಿಸುವರು. ರಾಮಚಂದ್ರನು ಸುವರ್ಣ ಸೀತಾಪ್ರತಿಮೆ ಇಟ್ಟುಕೊಂಡು ಯಜ್ಞ ನಡೆಸುವೆನೆಂದು ಋಷಿಗಳನ್ನು ಒಡಂಬಡಿಸುತ್ತಾನೆ. ಯಜ್ಞ ಪ್ರಾರಂಭವಾಗುತ್ತದೆ. ತನ್ನ ಅಗ್ಗಳಿಕೆಯ ಪತ್ರಿಕೆ ಹಣೆಗೆ ಕಟ್ಟಿ ಕುದುರೆ ಬಿಡುತ್ತಾನೆ ರಾಮಚಂದ್ರ. ಎಂಥೆಂಥವರು ಶ್ರೀರಾಮಚಂದ್ರನ ಹೆಸರು ಕೇಳಿ ಕುದುರೆ ಕಟ್ಟುವದಿಲ್ಲ. ಕುದುರೆ ವಾಲ್ಮೀಕಿ ಆಶ್ರಮಕ್ಕೆ ಬರುತ್ತದೆ. ಲವನು ಅಲ್ಲಿ ಬ್ರಾಹ್ಮಣ ಬಟುಗಳೊಡನೆ ಆಡುತ್ತಿರುತ್ತಾನೆ. ಹಣೆಯ ಪಟ್ಟದ ಲಿಖಿತವನ್ನೋದಿ 'ತನ್ನ ತಾಯಿಯೇನು ಬಂಜೆಯೇ ?' ಎಂದು ಲವನು ಕುದುರೆಯನ್ನು ಕಟ್ಟಿ ಹಾಕುತ್ತಾನೆ. ಬಟುಗಳು ಹೆದರುತ್ತಾರೆ. ವೈರಿಭಟರು ಬೆದರಿಸುತ್ತಾರೆ. ಆದರೆ ಲವನ ಬಾಣಗಳಮುಂದೆ ಅವರ ಆಟ ನಡೆಯುವದಿಲ್ಲ. ಶತ್ರುಘ್ನನಿಗೂ ಲವನಿಗೂ ಯುದ್ಧ ನಡೆದು ಲವನು ಮೂರ್ಛೆ ಹೋಗುತ್ತಾನೆ. ರಾಮಚಂದ್ರನಂತೆ ಕಾಣುವ ಆ ಬಾಲನನ್ನು ಶತ್ರುಘ್ನನು ಮಮತೆಯಿಂದ ರಥದಲ್ಲಿರಿಸಿಕೊಂಡು ಹೊರಡುತ್ತಾನೆ. ಈ ಸಂಗತಿಯನ್ನು ಬಟುಗಳಿಂದ ಕೇಳಿ ಸೀತೆ ವಿಲಾಪಮಾಡುತ್ತಾಳೆ. ಅಷ್ಟರಲ್ಲಿ ಸಮಿತ್ಪುಷ್ಪಾದಿಗಳಿಗಾಗಿ ಹೋದ ಕುಶನು ಬಂದು 'ಇದೇನು ದೊಡ್ಡ ಮಾತು' ಎಂದು ತಾರಕಾಸುರನ ಯುದ್ಧಕ್ಕಾಗಿ ಹೊರಟ ಶಿವಕುಮಾರನಂತೆ ಸಜ್ಜಾಗುತ್ತಾನೆ. ಶತ್ರುಗಳಿಗೆ ಅಪಶಕುನವಾಗುತ್ತದೆ. ಮುಂದಾದ ಯುದ್ಧದಲ್ಲಿ ಶತ್ರುಘ್ನನೂ ಉಳಿದರಸುಗಳು ರಣಾಂಗಣದಲ್ಲಿ ಬೀಳುತ್ತಾರೆ. ಲವನು

ಮೂರ್ಛೆಯಿಂದೆದ್ದು ಅಣ್ಣನನ್ನು ಕೂಡಿಕೊಳ್ಳುತ್ತಾನೆ. ಗಾಳಿಜೆಂಕೆ ಕೂಡಿದಂತಾಗು ತ್ತದೆ ವೈರಿಸೈನ್ಯಕ್ಕೆ! ಲವಕುಶರ ಈ ಪರಾಕ್ರಮದ ಸುದ್ದಿಯನ್ನು ರಾಮಚಂದ್ರನು ನಂಬುವದಿಲ್ಲ. ಆದರೇನು? ಲಕ್ಷ್ಮಣನು ಕಾಲಜಿತುವಿನೊಡನೆ ಯುದ್ಧಕ್ಕೆ ಹೊರಡು ತ್ತಾನೆ. ಘನಘೋರ ಯುದ್ಧವಾಗಿ ಕೊನೆಯಲ್ಲಿ ಲಕ್ಷ್ಮಣನೂ ಶತ್ರುಘ್ನನ ಗತಿಯ ಲ್ಲಿಯೇ ರಣಾಂಗಣದಲ್ಲಿ ಬೀಳುತ್ತಾನೆ. ರಾಮಚಂದ್ರನಿಗೆ, ಏನಾಗಿದೆಯೋ ತಿಳಿಯುವ ದಿಲ್ಲ. ಭರತನಿಗೆ ಹೇಳಿ ದೂತರನ್ನು ಅಟ್ಟುತ್ತಾನೆ. ಅವರು 'ಲವಕುಶರು ಮಹಾ ವೀರರು. ಅವರು ನಿನ್ನಾಕೃತಿಯವರು. ನೀನೇ ಕಾದದೆ ಗತಿಯಿಲ್ಲ ಅವರೊಡನೆ' ಎಂದು ಬಂದು ಹೇಳುತ್ತಾರೆ. ರಾಮನಿಗೆ ಮೂರ್ಛೆ ಬರುತ್ತದೆ. ಎಚ್ಚತ್ತು 'ಲಕ್ಷ್ಮಣನಿಗೆ ಹೀಗಾಯಿತೇ!' ಎಂದು ಶ್ರೀರಾಮ ಗೋಳಾಡುತ್ತಾನೆ. 'ಜಾನಕಿಗೆ ಮಾಡಿದ ಅನ್ಯಾ ಯದಿಂದಲೆ ಇದು ಹೀಗಾಯಿತು. ಲವಕುಶರು ರಾಮಪುತ್ರರೇ ಇರಬೇಕು. ಋಷಿ ಕುಮಾರರಿಗೆ ಈ ಬಲ ಎಲ್ಲಿಯದು?' ಎಂದು ಜನರು ಆಡಿಕೊಳ್ಳುತ್ತಾರೆ. ರಾಮಚಂದ್ರ ನಿಗೂ ಏನೂ ತೋಚುವದಿಲ್ಲ. ಭರತನು ಪ್ರಖ್ಯಾತ ಕಪಿವೀರರೊಂದಿಗೆ ಯುದ್ಧಭೂ ಮಿಗೆ ಹೊರಡುತ್ತಾನೆ. ಮೊದಲಿಗಿಂತಲೂ ಭಯಂಕರವಾದ ಸಂಗ್ರಾಮನಡೆಸಗಿ, ಕುಶನ ಬಾಣ ತಾಕಿದಲ್ಲಲ್ಲಿ ಮೂರ್ಛೆ, ಮೃತಿ ಉಂಟಾಗಿ, ದಳವೆಲ್ಲ ತಲ್ಲಣಿಸಿ ಹೋಗುವದು ಭರತನೂ ಮೂರ್ಛಿತನಾಗುವನು. ಈ ಸುದ್ದಿ ರಾಮಚಂದ್ರನಿಗೆ ಮುಟ್ಟಿದೊಡನೆ ಅವನು ಸುಗ್ರೀವ ವಿಭೀಷಣರೊಡನೆ ರಣಭೂಮಿಗೆ ಬರುತ್ತಾನೆ. ರಾಮಚಂದ್ರನಿಗೂ ಲವಕುಶರಿಗೂ ಮುಂದೆ ನಡೆದ ಸಂಭಾಷಣೆಯಿಂದ ಅವರಾರೆಂಬುದು ರಾಮಚಂದ್ರ ನಿಗೆ ತಿಳಿಯುತ್ತದೆ. 'ಸೀತೆ' ಯೆಂಬ ಹೆಸರು ಮಕ್ಕಳ ಬಾಯಿಂದ ಕೇಳಿ ರಾಮಚಂದ್ರ ಮೂರ್ಛಿತನಾಗುತ್ತಾನೆ. ಆದರೆ 'ಇವರು ಆವ ಪುರುಷಂಗೆ ಸಂಭವಿಸಿದರು?' ಎಂದು ಎಚ್ಚತ್ತ ರಾಮ ಕೇಳಬೇಕೆನ್ನುತ್ತಾನೆ. ಸುಗ್ರೀವನು ಅವನ ಸಂಶಯ ನಿವಾ ರಣೆ ಮಾಡುವಷ್ಟರಲ್ಲಿ ನೀಲನು ಯಜ್ಞಾಶ್ವ ಬಿಡಿಸಿಕೊಂಡು ಬಂದಿದ್ದನು. ಕುಶನು ಅದನ್ನು ಕಂಡು ಯುದ್ಧ ಪ್ರಾರಂಭಿಸುತ್ತಾನೆ. ಅನಿವಾರ್ಯವಾಗಿ ರಾಮಚಂದ್ರನೂ ಯುದ್ಧಕ್ಕನುವಾಗುತ್ತಾನೆ. ಕ್ಷತ್ರಿಯರ ಮನದ ರೀತಿಯೆ ಹಾಗೆ! ತಂದೆಮಕ್ಕಳಿದ್ದರೇ ನಾಯಿತು? ಪ್ರತಿಪಕ್ಷಿಗಳಾದಮೇಲೆ ತೀರಿತು. ಆದರೆ ಲವಕುಶರು ಯಾವ ಪುರುಷ ನಿಗೆ ಹುಟ್ಟಿದವರೆಂಬುದನ್ನು ವಿಧಿಯು ರಾಮಚಂದ್ರನಿಗೆ ಬೇರೆ ರೀತಿಯಿಂದ ಅನುಭವ ತಂದು ಕೊಟ್ಟಿತು. ಕುಶನ ಬಾಣಗಳಿಗೆ ರಾಮನೂ ಮೂರ್ಛಿತನಾಗುವನು. ಹೂಮಳೆ ಕರೆಯುವರು ದೇವತೆಗಳು! ಲವನು ಆಮೇಲೆ ಅನೇಕ ವಸ್ತ್ರಾಭರಣಗಳನ್ನು ಪತಿತ ವೀರರಿಂದ ಮೆಚ್ಚು ತಕ್ಕೊಂಡು ಜೀವದಿಂದುಳಿದೊಬ್ಬಬ್ಬರನ್ನು ಒಯ್ಯಬೇಕೆಂದು ಹುಡುಕುವಾಗ ಜಾಂಬುವಂತ, ಹನುಮಂತರು ಸಿಕ್ಕುವರು. ಅವರನ್ನೆ ಇವರು ಸೀತೆ ಯಿದಿರು ಒಯ್ಯುವರು. ಸೀತೆ ಇದನ್ನು ಕಂಡು 'ಘೋರ ಕರ್ಮವಾಯಿತು' ಎಂದು

ಹೆದರಿಕೊಂಡಳು. ಆಹೊತ್ತಿಗೆ ವಾಲ್ಮೀಕಿಮುನಿಗಳು ಬರುವರು. ಲವಕುಶರು 'ನಿಮ್ಮ ಪುಣ್ಯಾಶ್ರಮದಲ್ಲಿ ಭೂತಹಿಂಸೆ ಆಯಿತು ಕ್ಷಮಿಸಬೇಕು. ಆದರೆ ತಮ್ಮ ಪಾದದ ಬಲದಿಂದ ಗೆಲವೂ ಆಯಿತು ' ಎಂದು ಮುನಿಗೆ ತಿಳಿಸಿ ಯುದ್ಧದ ವೃತ್ತಾಂತ ಹೇಳುವರು. ಸೀತೆಗೆ ಸಮಾಧಾನ ಹೇಳಿ ವಾಲ್ಮೀಕಿ ತನ್ನ ಕಮಂಡಲೂದಕದಿಂದ ಪ್ರೋಕ್ಷಿಸಿ ರಾಮನನ್ನು ಎಚ್ಚರಿಸುವನು. ಆಮೇಲೆ ಕುಶಲ ಪ್ರಶ್ನೆಗಳಾಗಿ, ಏಕಾಂತದಲ್ಲಿ ವಾಲ್ಮೀಕಿ ಸೀತೆಯ ಸಂಗತಿಯನ್ನೆಲ್ಲ ಅರುಹುವನು. ಕುಶಲವರು ರಾಮಾಯಣವನ್ನು ಹಾಡಿತೋರಿಸುವರು. ರಾಮನಿಗೆ ಮಕ್ಕಳನ್ನು ಕಂಡು ಸೀತೆಯ ನೆನಪಾಗಿ ಮೋಹ ವುಂಟಾಗುವದು, ಅಭಿಮಾನವೂ ಎನಿಸುವದು. 'ನಿನ್ನ ಪಾದಕ್ಕೆ ದ್ರೋಹಮಾಡಿದೆವು. ಸೈರಿಸುವದು ' ಎಂದು ಲವಕುಶರು ರಾಮನಿಗೆರಗುವರು. ಹೀಗೆ ಸೀತೆಯು ಲೋಕ ದಿದಿರೆ ಪರಿಶುದ್ಧಳೆಂದು ಸಿದ್ಧವಾಗಲು, ರಾಮನು ಸೀತೆಯನ್ನು ತನ್ನಕಡೆಗೆ ಕಳುಹ ಬೇಕೆಂದು ವಾಲ್ಮೀಕಿಗೆ ಹೇಳಿ ಮಕ್ಕಳೊಡನೆ ಯಜ್ಞಕ್ಕಾಗಿ ತನ್ನೂರಿಗೆ ಬಂದು, ಅದನ್ನು ಮುಗಿಸುವನು. ಸೀತೆಗೆ ಮಕ್ಕಳು ಎಲ್ಲಿ ಹೋದರೋ ಎಂದು ಕಳವಳವಾಗಲು ವಾಲ್ಮೀಕಿ ಸಮಾಧಾನ ಹೇಳಿ ಆಕೆಯನ್ನೂ ಒಡಂಬಡಿಸಿ ಅಯೋಧ್ಯೆಗೆ ಕಳುಹುವನು. (ಸಂ. ೨೧).

ಅರ್ಜುನ ಬಭ್ರುವಾಹನರ ಕಾಳಗವೂ ಹೀಗೆ ಕೊನೆಗಾಣುವದೆಂಬುದು ಈ ಕಥೆಯಿಂದಲೇ ಅನೇಕ ಮುಖವಾಗಿ ಸೂಚಿತವಾಗಿದೆ. ಮುಂದಾದ ಯುದ್ಧದ ಆರ್ಭ ಟೆಯನ್ನು ಲಕ್ಷ್ಮೀಶನ ಶಬ್ದಗಳಿಂದಲೆ ತಿಳಿದುಕೊಳ್ಳುವದುಚಿತ. ಬಭ್ರುವಾಹನನಿದಿರು ಯಾರ ಸಹಾಸವೂ ಹಸಗೆಡುವುದು. ಕೊನೆಗೆ ಅಪಶಕುನ ಸೂಚನೆಯಾಗಿ ಅರ್ಜುನನ ಮಕುಟದ ಮೇಲೆ ಹದ್ದು ಎರಗುವದು. ವೃಷಕೇತುವಿಗೆ ಹಸ್ತಿನಾವತಿಗೆ ಹೋಗೆಂದು ಅರ್ಜುನ ಸೂಚಿಸುವನು. 'ಏಕಪತ್ನಿಯಾಗಿರುವ ಸತಿಗೆ ಮುಖ ಹೇಗೆ ತೋರಿಸಲಿ; ಹೋಗಲಾರೆ. ನಿನ್ನ ಕಣ್ಣುಗಳಿಗೆ ಹಬ್ಬ ಮಾಡುವೆನು' ಎಂದು ಹೇಳಿ ವೀರನಂತೆ ಕಾದಿ ಮಡಿಯುತ್ತಾನೆ ವೃಷಕೇತು. 'ನಾರಾಯಣ ಮುಕುಂದ ಮಾಧವಾ' ಎನ್ನುತ್ತ ವೃಷಕೇತುವಿನ ಶಿರವು ಪಾರ್ಥನಿದಿರು ಬಂದು ಬೀಳುವದು. 'ಕೃಷ್ಣರಾಯ ನಿಗೆ ನಿನ್ನ ಮರಣ ಒಪ್ಪಿಗೆಯಾಯಿತೇ?" ಎಂದು ಅರ್ಜುನ ಶೋಕ ಮಾಡುವನು. ಬಭ್ರುವಾಹನನು ಇದೇ ಹೊತ್ತಿಗೆ ತನ್ನ ವಾಗ್ಬಾಣ ಬಿಡುವನು. 'ನಾವು ವೈಶ್ಯರ ಹೊಟ್ಟೆಯವರಷ್ಟೆ! ಎಲ್ಲರ ರುಂಡಮುಂಡಗಳನ್ನು ಕೊಂಡೆವು. ಬೇರೆ ಸಂಚಕಾರ ಬೇಕಾದರೆ ನಿನ್ನತಲೆ ಬೆಲೆಗೆಕೊಳ್ಳುವ ಸಾಹಸಧನ ನನ್ನ ಭುಜದಲ್ಲಿದೆ.!' ಎಂದು ತಿವಿದು ಅರ್ಜುನನ್ನು ಕೆರಳಿಸುವನು. ಆದರೆ ದೈವವೇ ವಿರುದ್ಧವಿದ್ದಾಗ ಕೆರಳಿದರೇನು? 'ಪತಿವ್ರತೆಯಾದ ನನ್ನ ತಾಯಿಯನ್ನು ವ್ಯರ್ಥವಾಗಿ ನೀನು ನಿಂದಿಸಿದೆ. ನಿನ್ನ ಭುಜಕ್ಕೆ

ಬಲ ಉಳಿದೀತೇ ! ' ಎಂದು ಹಂಗಿಸುವನು ಬಭ್ರುವಾಹನ. ಆಯಿತು, ಸುರನದಿಯು ಶಾಪ, ತನ್ನ ನಾಲಿಗೆಯ ಪಾಪ, ಬಾಣಾಕಾರವಾಗಿ ಬಂದ ಜನ್ಮಾಂತರದ ಜ್ವಾಲೆಯು ಕೋಪ ಮುಪ್ಪುರಿಗೊಂಡು ಅರ್ಜುನನ ತಲೆ ನಭದಲ್ಲಿ ಜಿಗಿದು ' ಕೇಶವಾ ಕೃಷ್ಣಾ ' ಎಂದು ವೃಷಕೇತುವಿನ ಶಿರದ ಹತ್ತಿರ ಬಂದು ಬೀಳುವದು. ಇದು ಆದದ್ದು ವೈಷ್ಣವರಿಗೆ ಪವಿತ್ರದಿನವೆನಿಸುವ ಕಾರ್ತಿಕ ಏಕಾದಶಿಯ ದಿನ !

ಬಭ್ರುವಾಹನನಿಗೇನೋ ಇದು ಜಯೋತ್ಸವವಾಗಿ ತೋರಿತು. ಪಾಪ ! ಚಿತ್ರಾಂಗದೆ ಮಗನನ್ನೇ ಬೈದಳು. 'ವಾಸುದೇವನ ಸಖನು ಮಡಿದನೇ' ಎಂದು ಅತ್ತಳು. 'ಸುಡಲಿ, ಇಂಥ ಸುತರೇಕೆ' ಎಂದು ಆಕ್ರೋಶ ಮಾಡಿದಳು. ಕೊಲ್ಲದಿದ್ದರೆ ತಂದೆಗೆ ಸಮ್ಮತವಿಲ್ಲ, ಕೊಂದರೆ ತಾಯಿಗೆ ಅಭಿಮತವಿಲ್ಲ. ಅವನು ಹುಟ್ಟಿದ ಮೂಹೂರ್ತ ಅಂತಹದೇನೋ ! ಉಲೂಪಿಯೂ ಅಷ್ಟರಲ್ಲಿ ಬಂದು 'ತನ್ನ ಕೇಳೀವನದೊಳಗಿನ ಪಂಚದಾಡಿಮದ್ರುಮ ಒಣಗಿದ್ದರೆ ಅರ್ಜುನನ ಮೃತಿ ನಿಜ' ಎಂದು ಪ್ರಮಾಣಿಸಿಕೊಂಡು ಬರುವಳು. ಉಲೂಪಿ ಚಿತ್ರಾಂಗದೆಯರು ಪಾರ್ಥ ವೃಷಕೇತುಗಳಡಿಯಲ್ಲಿ ಉರುಳಾಡಿ ಹಾಡಿ ಹಾಡಿ ಅಳುವರು. 'ಭಾರ್ಗವ ಕೊಂದಂತೆ ನಿನ್ನ ತಾಯಂದಿರನ್ನೂ ಕೊಲ್ಲು ; ಈ ವೈಧವ್ಯ ತಾಳುವದೆಂತು' ಎನ್ನುವಳು ಚಿತ್ರಾಂಗದೆ. ಪಿತೃವಧೆಗಾಗಿ ಅವನು ಕಿಚ್ಚು ಹುಗಲನುವಾಗುವನು. ಮುಕುಂದ ಸ್ಮರಣೆಯಿಂದ ಎಂಥ ಪಾಪವೂ ಹೋಗಬಹುದಾಗಿತ್ತು. ಅರ್ಜುನನು ವೈಷ್ಣವ ! ಅವನನ್ನು ಕೊಂದ ಅಪಕೀರ್ತಿ ಹೇಗೆ ಹೋದೀತೆಂದು ಚಿಂತಿಸಿ, ಅದಕ್ಕೆ ಅಗ್ನಿ ಪ್ರವೇಶವೇ ಪ್ರಾಯಶ್ಚಿತ್ತವೆಂದು ನಿಶ್ಚಯಿಸುತ್ತಾನೆ. ಆದರೆ 'ನರನ ಜೀವಕ್ಕೆ ಕೃಷ್ಣನೇ ಹೊಣೆಯಿರುವಾಗ, ಅರ್ಜುನನ ಸಾವು ಸತ್ಯವಾಗಬಲ್ಲದೇ ? ಹೇಗಿದ್ದರೂ ಕೃಷ್ಣ ಬರಲೇ ಬೇಕು. ತಡೆ' ಎಂದು ಚಿತ್ರಾಂಗದೆ ಮರಳಿ ವಿವೇಕ ಹೇಳುತ್ತಾಳೆ ಮಗನಿಗೆ. (ಸ. ೨೩).

ಇಷ್ಟರಲ್ಲಿ ಉಲೂಪಿಗೆ ಇನ್ನೊಂದು ಉಪಾಯ ಹೊಳೆಯುತ್ತಿದೆ. ಆದಿಶೇಷನಲ್ಲಿ ಸಂಜೀವಕ ಮಣಿಯಿದೆ. ಅವನು ತನ್ನ ತಂದೆ, ಅಳಿಯನ ಜೀವ ಉಳಿಸಲು ಅವನು ಅದನ್ನು ಕೊಡದಿರಲಾರ. ಆದರೆ ಅದನ್ನು ತರುವ ಧೀರರಾರು ? ಬಭ್ರುವಾಹನ 'ಅದು ತನಗೆ ಸಾಧ್ಯ' ಎನ್ನುತ್ತಾನೆ. ತಾಯಿ 'ಅನ್ಯರಿಂದ ತಕ್ಕೊಳ್ಳುವ ಕಾರ್ಯದಲ್ಲಿ ವಿನಯ ಬೇಕು' ಎಂದು ಮಗನಿಗೆ ತಿಳಿಹೇಳಿ, ಪುಂಡರೀಕನೆಂಬೊಬ್ಬ ಆಪ್ತಮಿತ್ರನನ್ನು ನೆನೆಯುತ್ತಾಳೆ. ಅವನು ನೆನೆದೊಡನೆ ಬರುತ್ತಾನೆ. ಸಂಜೀವಕ ಮಣಿಯನ್ನು ತರಲೊಪ್ಪಿ ನಾಗಲೋಕಕ್ಕೆ ಹೋಗುತ್ತಾನೆ. ಶೇಷನು ವೈಷ್ಣವನಾದ ತನ್ನ ಜಾಮಾತನನ್ನು ಉಳುಹಲು ಸಂಜೀವಕ ಮಣಿಯನ್ನು ಕೊಡಲೊಪ್ಪುತ್ತಾನೆ. ಆದರೆ ಧೃತರಾಷ್ಟ್ರನೆಂಬೊಬ್ಬ ಮಂತ್ರಿ ಅವಿಚಾರದಿಂದ ಅವನನ್ನು ವಿರೋಧಿಸುತ್ತಾನೆ. 'ಪಾರ್ಥನ

ಜೀವವು ಕೃಷ್ಣನಿಗೆ ಇಷ್ಟವಾದುದರಿಂದ ತಾವು ಸಂಜೀವಕಮಣಿಯನ್ನು ಕೊಡದಿರು ವದೇನೂ ನಷ್ಟವಲ್ಲ. ಕೊಡುವದು ಉತ್ತಮ' ಎಂದು ಸೂಚಿಸಿದರೆ, ಧೃತರಾಷ್ಟ್ರನು 'ಅಂತೆಯೆ ಮಣಿ ಕೊಡಬೇಡ. ಗರುಡನ ಹಾವಳಿಗೆ ಈಡಾದ ನಮಗೆ ಅದು ಬೇಡವೇ ?' ಎಂದು ವಾದ ಹೂಡುವನು. 'ಪರೋಪಕಾರಕ್ಕೆ ಈ ಹಾವುಗಳು ಮಣಿ ಕೊಡಲಾರವು' ಎಂಬ ನಿರೋಪ ತಕ್ಕೊಂಡು ಪುಂಡರೀಕ ಮರಳಿ ಬರುತ್ತಾನೆ. ಬಭ್ರುವಾಹನನು ಇದನ್ನು ಕೇಳಿ ಕನಲಿ ತನ್ನ ಮಂತ್ರಾಸ್ತ್ರಗಳಿಂದ ಫಣಿ ಕುಲವನ್ನು ಸಂತ್ರಸ್ತವಾಗಿಸುವನು. ಆಗ ಫಣಿ ಕುಲವು ಬಭ್ರುವಾಹನನಿಗೆ ಬೇಕಾದ ವಸ್ತು ಕೊಟ್ಟು ತಮ್ಮನ್ನುಳಿಸಿಕೊಳ್ಳಬೇಕೆಂದು ಶೇಷನಿಗೆ ಬೇಡಿಕೊಳ್ಳುವರು. ಮುರಹರನು ಸಿಟ್ಟಿಗೆದ್ದಾನು. ಸಂಜೀವಕಮಣಿಯನ್ನು ಕೊಡೋಣ ಎಂದು ಸೂಚಿಸುವರು. 'ಕ್ಷೀರಸಾಗರಕ್ಕೆ ಹಾಲು ಕೊಟ್ಟರೆ ಏನುಪಕಾರ ? ನೀವು ಅದನ್ನು ಮೊದಲು ಕೊಡದಿದ್ದ ಪಾಪಕ್ಕಾಗಿ ಕೃಷ್ಣನನ್ನು ನೋಡಿ ದೋಷ ಕಳೆದುಕೊಳ್ಳ ಬನ್ನಿ' ಎಂದು ಎಲ್ಲರೊಡನೆ ಶೇಷನು ಸಂಜೀವಕಮಣಿಸಹಿತ ಪಾರ್ಥ ಬಿದ್ದಲ್ಲಿಗೆ ಬರುವನು.

ಆದರೆ ಅಷ್ಟರಲ್ಲಿ ದುಷ್ಟ ಧೃತರಾಷ್ಟ್ರ ಸರ್ಪನ ಮಕ್ಕಳಾದ ದುರ್ಬುದ್ಧಿ ದುಷ್ಟಸ್ವಭಾವರು ತಂದೆಯ ಪಕ್ಷವಹಿಸಿ ಪಾರ್ಥನ ಶಿರವನ್ನೆ ಕದ್ದು ಬಕದಾಲ್ಭ್ಯನ ಅರಣ್ಯದಲ್ಲಿ ಬಿಸುಟಿರುವರು. ಬಭ್ರುವಾಹನ ಮಣಿಯೊಡನೆ ಬರುತ್ತಾನೆ. ಚಿತ್ರಾಂಗದೆ ಉಲೂಪಿಯರನ್ನೆಬ್ಬಿಸುತ್ತಾನೆ. ಅವರು ನೋಡುತ್ತಾರೆ; ಅರ್ಜುನನ ಶಿರವಿಲ್ಲ. ಬಭ್ರುವಾಹನನೂ ಮುಂಗಾಣದೆ ಮೃತಕಲ್ಪನಾಗಿ ಬಿದ್ದು ಬಿಡುತ್ತಾನೆ.

ಅತ್ತ ಕುಂತಿಗೆ ದುಃಸ್ವಪ್ನವಾಗುತ್ತದೆ. 'ಕೃಷ್ಣಾ ನಿನ್ನ ಗೆಳೆಯ ಜೀವಂತನಾಗಿರುವನೋ, ಇಲ್ಲವೋ' ಎಂದು ಹಲಬುವಳು. ಕೂಡಲೆ ಕೃಷ್ಣನು ಗರುಡನನ್ನೇರಿ ಭೀಮ, ದೇವಕಿ, ಯಶೋದೆ, ಕುಂತಿಯರೊಡನೆ ಮಣಿಪುರದ ರಣಾಂಗಣಕ್ಕೆ ಬರುವನು. ಅಲ್ಲಿಯ ಸ್ಥಿತಿಯನ್ನು ಕಂಡು ಕೃಷ್ಣನೂ ಮಾನವನಂತೆ ಮೈದುನನಿಗಾಗಿ ಮರುಗುವನು. ಭೀಮ, ವೃಷಕೇತುವೂ ಸತ್ತುಬಿದ್ದುದನ್ನು ನೋಡಿ ಇವರನ್ನು ಕೊಂದವನಾವನು ಕದನಕ್ಕೆ ಬರಲಿ ಎಂದು ಗರ್ಜಿಸುತ್ತಾನೆ. ಅಷ್ಟು ಹೊತ್ತಿಗೆ ಉಲೂಪಿಯ ಆರೈಕೆಯಲ್ಲಿದ್ದ ಅನಿರುದ್ಧ, ಸಾತ್ಯಕಿ, ಪ್ರದ್ಯುಮ್ನರು ಅಲ್ಲಿಗೆ ಬಂದು ಬಭ್ರುವಾಹನನ್ನು ಎಚ್ಚರಿಸಿ, ಆದ ಸಂಗತಿಯನ್ನೆಲ್ಲ ಭೀಮ, ಕೃಷ್ಣರಿಗೆ ಹೇಳುವರು. 'ನಿಮ್ಮ ತಮ್ಮನನ್ನು ಕೊಂದ ನನ್ನನ್ನು ಕೊಂದು ಬಿಡಿ' ಎಂದು ಪಾಪ! ಬಭ್ರುವಾಹನ ಭೀಮನಿಗೆರಗುವನು, 'ಭಾಗವತ ಪಕ್ಷಕಗ್ರೇಸರನಾದ ಅರ್ಜುನನ್ನು ಕೊಂದಿರುವೆ; ನಿನ್ನ ಚಕ್ರದಿಂದ ನನ್ನನ್ನು ಕೊಲ್ಲು' ಎಂದು ಕೃಷ್ಣನ ಕಾಲು ಕಟ್ಟಿಕೊಳ್ಳುವನು. ಎಲ್ಲರ ಕಾಲಿಗೆ ಬೀಳುವನು. ಕುಂತಿಯ ದುಃಖಕ್ಕೆ ಕೊನೆಯಿಲ್ಲದಾಗುವದು.

ಈ ಹೊತ್ತಿಗೆ ಶೇಷನು ಕೃಷ್ಣನಿಗೆರಗಿ 'ಸ್ವಾಮಿ; ನಿನಗೆ ಗೊತ್ತಿಲ್ಲದುದು ಏನಿವೆ? ನಿನ್ನ ಭಕ್ತರಿಗೆ ಭಯಶೋಕತಾಪಗಳೇ? ಇಗೋ ಈ ಸಂಜೀವಕ ಮಣಿ. ಅವನ ತಲೆಯೆಲ್ಲಿದೆಯೊ ತರಿಸು' ಎಂದು ವಿಜ್ಞಾಪಿಸುವನು. ಕೃಷ್ಣನು ತನ್ನ ಬ್ರಹ್ಮ ಚರ್ಯದ ಆಣೆಯಿಟ್ಟು, ಶಿರ ಕದ್ದೊಯ್ದ ದ್ರೋಹಿಗಳು ಹತರಾಗಿ, ಇದ್ದಲ್ಲಿಂದ ಶಿರವು ಇಲ್ಲಿ ಬರಲಿ' ಎಂದು ಸುದರ್ಶನಕ್ಕೆ ಆಜ್ಞಾಪಿಸುವನು. ದುರ್ಬುದ್ಧಿ, ದುಃಸ್ವಭಾವರು ಸತ್ತು, ಅರ್ಜುನನ ತಲೆ ಬರುವದು. ಕೃಷ್ಣನು 'ಈಶನ ಆಜ್ಞೆಯಿಂದ, ಅರ್ಜುನ ಜೀವಿ ಸಲಿ' ಎಂದು ದೇಹ-ರುಂಡ ಜೋಡಿಸಿ, ಸಂಜೀವಕಮಣಿ ಹೃದಯಕ್ಕೆ ಮುಟ್ಟಿಸು ತ್ತಾನೆ. ಅರ್ಜುನ, ವೃಷಕೇತುಗಳಿಬ್ಬರೂ ಸಜೀವರಾಗಿ ಕೃಷ್ಣಧ್ಯಾನವನ್ನು ಮಾಡುತ್ತ ಏಳುತ್ತಾರೆ. ಕೃಷ್ಣನಿಗೆ ನಮಿಸುತ್ತಾರೆ. ಎಲ್ಲರಿಗೂ ಆನಂದವಾಗುತ್ತದೆ. ಕೃಷ್ಣ ಪಾಂಚಜನ್ಯ ಊದುತ್ತಾನೆ. ಅರ್ಜುನನಿಗೆ ಈ ಮರಣ, ಗಂಗೆಯ ಶಾಪಮೂಲಕವಾಗಿ ಅವನಿಗೆ ಬಂದಿತೆಂದು ತಿಳಿಸುತ್ತಾನೆ. ಬಭ್ರುವಾಹನನ ಪ್ರಾರ್ಥನೆಯಂತೆ ಎಲ್ಲರೂ ಮಣಿಪುರವನ್ನು ಪ್ರವೇಶಿಸುತ್ತಾರೆ. ಬಭ್ರುವಾಹನನು ತಂದೆಗೆ ಸಮಸ್ತ ವೈಭವಸಹಿತ ತನ್ನ ರಾಜ್ಯ ಒಪ್ಪಿಸುತ್ತಾನೆ. ಅರ್ಜುನ ಮಾತನಾಡುವದೇ ಇಲ್ಲ. ಭೀಮ, ಶೇಷಾದಿ ಗಳು ಅವನಿಗೆ ಸಮಾಧಾನ ಹೇಳುವರು; ಕೃಷ್ಣನೂ ಅರ್ಜುನನಿಗೆ ತಿಳಿಹೇಳಬೇಕೆಂದು ಕೇಳಿಕೊಳ್ಳುವರು. ಇದನ್ನು ನೋಡಿ ಬಭ್ರುವಾಹನ ಮತ್ತೆ ಪಾಪ! ಕೃಷ್ಣಭಕ್ತ ನನ್ನು ಕೊಂದುದಕ್ಕಾಗಿ ತಾನು ಹಿಮಾಲಯ ಸೇರುವನೆಂದು ಸಾರುವನು. ಕೃಷ್ಣ ದರ್ಶನವಾದ ಮೇಲೆ ಪಾಪವೆಲ್ಲಿ ಉಳಿಯಿತು?' ಎಂದು ಭೀಮಸೇನ ಬಭ್ರುವಾ ಹನನಿಗೆ ತಿಳಿಹೇಳುವನು. ಅರ್ಜುನನೂ ಮಗನಿಗೆ ಸಂತಯಿಸುವನು. ಆಮೇಲೆ ಸಕಲ ಭೋಗಗಳಲ್ಲಿ ನಾಲ್ಕೈದು ದಿನ ಕಳೆದು ಕೃಷ್ಣ ಅರ್ಜುನ ಮತ್ತು ಅರಸರೆ ಲ್ಲರೂ ಕುದುರೆಯ ಕಾವಲಾಗಿ ಮುಂದೆ ಸಾಗುವರು, ಉಳಿದವರು ಹಸ್ತಿನಾವತಿಗೆ ಹೋಗುವರು. (ಸಂ. ೨೪)

ಕುದುರೆ ರತ್ನಪುರಕ್ಕೆ ಹೋಗುವದು. ಇಲ್ಲಿಯ ಅರಸನು ಏಳು ಅಶ್ವ ಮೇಧಮಾಡಿ ಎಂಟನೆಯದನ್ನು ಸಾಗಿಸಿದ್ದನು. ಇಲ್ಲಿಯ ಅರಸನಿದಿರು ನೃತ್ಯದ ದಿನ ದಿನದ ಪುಷ್ಪಾಂಜಲಿಗೆ ಬಭ್ರುವಾಹನ ಮುತ್ತಿನ ಕಾಣಿಕೆ ಕಳುಹುತ್ತಿದ್ದ. ಇಂಥ ಬಲಾಢ್ಯ ರಾಜ ಮಯೂರಧ್ವಜ. ಅವನಂತೆಯೆ ಪರಾಕ್ರಮಿ ಅವನ ಮಗ ತಾಮ್ರಧ್ವಜ. ಪಾಂಡವರ ಅಶ್ವಮೇಧ ಕುದುರೆ ಬಂದು ತಾಮ್ರಧ್ವಜನ ಅಶ್ವ ಮೇಧದ ಕುದುರೆಯೊಡನೆ ಭುಜ ತಿಕ್ಕತೊಡಗಿತು. ತಾಮ್ರಧ್ವಜನು ಅದರ ಲಲಾಟ ಲಿಖಿತವನ್ನೋದಿ 'ಒಳ್ಳೆಯದೇ ಆಯಿತು ಎಂಟನೆಯ ಅಶ್ವಮೇಧವಾ

ದರೂ ಕೃಷ್ಣಸಹಿತವಾಗುವದಲ್ಲಾ' ಎಂದು ಉಬ್ಬಿದನು. ಮುಸಗಿದ ಯುದ್ಧದಲ್ಲಿ ನರನಾರಾಯಣರಿಬ್ಬರೂ ಅಧರ್ಮಕ್ಕೂ ಹಿಂಜರಿಯದೆ ಒಬ್ಬ ತಾಮ್ರಧ್ವಜನೊಡನೆ ಹೆಣಗಾಡಿ ಏಕಕಾಲಕ್ಕೆ ಕಾದಾಡುವರು. ತಾಮ್ರಧ್ವಜನು ತನ್ನ ಅತುಲ ಸಾಹಸದಿಂದ ಕೃಷ್ಣನಿಗೆ ಚಕ್ರ ಹಿಡಿಯ ಹಚ್ಚುವನು. ಚಕ್ರ ಹಿಡಿದಾದರೂ ಏನು! ತಾಮ್ರಧ್ವಜನು ಕೃಷ್ಣನ ಮೈಮೇಲೆ ಏರಿ ಹೋಗಿ ಅವನ ಪಾದಕ್ಕೆ ನಮಸ್ಕರಿಸಿ, ತನ್ನ ಭುಜಬಲದಿಂದ ನರನಾರಾಯಣರಿಬ್ಬರನ್ನೂ ಬಿಗಿದು ಹಾಕುವನು. ಕೃಷ್ಣನು ಅವನನ್ನು ಒದೆಯುವನು. ಮೂವರೊಳಗಾದ ಮಲ್ಲಾಮಲ್ಲಿಯಲ್ಲಿ ಮೂವರೂ ಮೂರ್ಛಿತರಾಗುವರು. ಆದರೆ ಮೊದಲೆಚ್ಚತ್ತವನು ತಾಮ್ರಧ್ವಜ. ಅವನು ಎದ್ದು ಎರಡೂ ಕುದುರೆಗಳನ್ನಟ್ಟಿಕೊಂಡು ತಂದೆಯಿದ್ದಲ್ಲಿಗೆ ಬರುವನು. ಯುದ್ಧದ ವಿವರವನ್ನು ಹೇಳುವನು. ಅದನ್ನು ಕೇಳಿ ಮಯೂರಧ್ವಜನು 'ಮಗನೇ ಹಗೆಯಾದನಲ್ಲಾ! ನಿಜ 'ಹರಿ' (ಕೃಷ್ಣ) ಯನ್ನು ಬಿಟ್ಟು 'ಹರಿ' ಹೆಸರಿನ ಕತ್ತೆಯನ್ನಟ್ಟಿಕೊಂಡು ಬಂದನೇ?' ಎಂದು ಕಳವಳಗೊಳ್ಳುವನು. ಮಗನನ್ನು ಬಯ್ಯುವನು! "ಕೃಷ್ಣಾರ್ಜುನರು ಎಲ್ಲಿರುವರು ಹೇಳು? ಸಾಕು ಈ ಯಜ್ಞ" ಎಂದು ಮಯೂರಧ್ವಜನು ಯಜ್ಞವನ್ನೇ ನಿಲ್ಲಿಸಿ ಬಿಡುವನು. (ಸಂ. ೨೫).

ಇತ್ತ ಕೃಷ್ಣಾರ್ಜುನರು ಎಚ್ಚರಿಯುವರು. ಕೃಷ್ಣನಿಗೆ, ಒಂದು ನಾಟಕ ಹೂಡಿ, ಮಯೂರಧ್ವಜನ ಭಕ್ತಿಮಹಾತ್ಮ್ಯವನ್ನು ಅರ್ಜುನನಿಗೆ ತೋರಿಸುವ ಕುತೂಹಲ ಉಂಟಾಗುವದು. ಸೈನ್ಯ ಹಿಂದುಳಿಸಿ, ಕೃಷ್ಣನು ವೃದ್ಧ ಬ್ರಾಹ್ಮಣನಾಗಿಯೂ ಅರ್ಜುನ ಅವನ ಶಿಷ್ಯನಾಗಿಯೂ ಇಬ್ಬರೂ ರತ್ನಪುರಿಗೆ ಹೊರಟರು. ಆ ಊರಿನ ವೇಶ್ಯಾವಾಟದಲ್ಲಿಯೂ ಕೃಷ್ಣಸ್ಮರಣೆ ನಡೆದಿರುವದನ್ನು ಅರ್ಜುನನಿಗೆ ತೋರಿಸುತ್ತ, ಮರುದಿನ ಬೆಳಗು ಕೃಷ್ಣ ಅರ್ಜುನನೊಡನೆ ಮಯೂರಧ್ವಜನ ಸಭಾಗೃಹಕ್ಕೆ ಬರುವನು. ಮಯೂರಧ್ವಜನೊ ಕೃಷ್ಣನಿದ್ದಲ್ಲಿಗೆ ತಾನು ಹೋಗಬೇಕೆಂಬ ಚಿಂತೆಯಲ್ಲಿಯೇ ಇದ್ದನು. ಏಕಾಏಕಿಯಾಗಿ ವೃದ್ಧ ಬಾಹ್ಮಣನೊಬ್ಬನು ಅವನ ಸಭೆಗೆ ಬಂದು ಅವನು ಉಪಚರಿಸಿ ನಮಸ್ಕರಿಸುವ ಮೊದಲೆ 'ಸ್ವಸ್ತ್ಯಸ್ತು' ಎಂದು ಹೇಳುವನು. ರಾಜನಿಗೆ ದಿಗಿಲಾಗುವದು. ರಾಜನಿಗೂ ಬ್ರಾಹ್ಮಣನಿಗೂ ಪ್ರಶ್ನೋತ್ತರಗಳಾಗುವವು. ಬ್ರಾಹ್ಮಣನು ತಾನು ಧರ್ಮಪುರದ ಕೃಷ್ಣಶರ್ಮನೆಂದೂ, ಇಲ್ಲಿಯ ರಾಜನ ಪುರೋಹಿತನಲ್ಲಿ ತನ್ನ ಮಗನೊಡನೆ ಕನ್ಯಾರ್ಥಿಯಾಗಿ ತಾನು ಬಂದಿದ್ದನೆಂದೂ, ಹಾದಿಯಲ್ಲಿ ಒಂದು ಸಿಂಹ ತನ್ನ ಮಗನನ್ನು ಹಿಡಿದಿತೆಂದೂ, ಅದು ವಿಸ್ಮಯಕಾರಕವಾಗಿ ಮಾನವರ ತೆರದಿಂದ ಮಾತನಾಡಿ "ನಿನ್ನ ಮಗನಂತೂ ನನಗೆ ಸಿಕ್ಕಿದ್ದಾನೆ. ಮಕ್ಕಳಿಲ್ಲದೆ ಗತಿಯಿಲ್ಲವೆಂಬು

ದಂತೂ ಶಾಸ್ತ್ರಸಿದ್ಧಾಂತವೇ! ನಿನ್ನ ಮಗುವನ್ನು ನನ್ನಿಂದ ಯಾರು ಬಿಡಿಸುವರೋ ನೋಡೋಣ" ಎಂದುದಕ್ಕೆ ತಾನು ತನ್ನನ್ನು ಅದಕ್ಕೆ ಆಹುತಿಗೊಡಲು ಸಿದ್ಧವಾದರೂ, ಮುಪ್ಪಿನವನನ್ನು ತಕ್ಕೊಂಡು ಏನು ಮಾಡಲಿ ಎಂದು ಅದು ಹೇಳಲಾಗಿ ತಾನು ತನ್ನ ಮಗನನ್ನು ತಮ್ಮ ದಾನದಿಂದ ಕಾಯುವ ದಾನಿಗಳಿಲ್ಲವೆ ಲೋಕದಲ್ಲಿ ಎಂದು ಗೋಳಿಡುವದನ್ನು ಕೇಳಿ ಮಯೂರಧ್ವಜನ ಅರ್ಧ ದೇಹ ಕೊಟ್ಟರೆ ತನ್ನ ಮಗನನ್ನು ಬಿಡುವೆನು ಎಂದಿತು – ಎಂದು ಮಯೂರಧ್ವಜನಿಗೆ ಹೇಳುವನು. ತಾನು ಇದು ಭ್ರಾಮಕ ಎಂದು ಚಿಂತಿಸಿದರೂ ಸಿಂಹವು ಮಾತ್ರ ಮಯೂರಧ್ವಜನನು ತಾನು ಬೇಡಿದುದನ್ನು ಕೊಟ್ಟೇ ಕೊಡುವನೆಂದು ನಿರ್ಧಾರದಿಂದ ಹೇಳಿದ್ದಕ್ಕಾಗಿ ಅವನೆಡೆಗೆ ತಾನು ಬಂದನೆಂದೂ ಬ್ರಾಹ್ಮಣ ತಿಳಿಸುವನು. ಮಯೂರಧ್ವಜನು, "ರಾಜ್ಯವನ್ನು ಮಗನಿಗೊಪ್ಪಿಸಿ ನಿನಗೆ ದೇಹಾರ್ಧ ಕೊಡುವೆನು" ಎಂದು ಹೇಳಿ, ಗಂಗಾಸ್ನಾನ, ಸಾಲಗ್ರಾಮ ತೀರ್ಥಪಾನ, ತುಲಸೀಮಾಲಾಧಾರಣ ಮಾಡಿ ತನ್ನ ಸಭೆಯಲ್ಲಿ ನೆರೆದ ಬ್ರಾಹ್ಮಣ ಸಮೂಹಕ್ಕೆ "ಬಲಿಯ ಯಜ್ಞಕ್ಕೆ ವಾಮನ ಬಂದಂತೆ, ಈ ಬ್ರಾಹ್ಮಣ ತನ್ನ ಸಭೆಗೆ ದಾನಾರ್ಥಿಯಾಗಿ ಬಂದಿರುವದರಿಂದ ಅವನೆ ಮಾಧವ ಸ್ವರೂಪನೆಂದು ತಿಳಿದು ನಾನು ಅವನಿಗೆ ನನ್ನ ದೇಹಾರ್ಧವನ್ನು ಕೊಯ್ದು ಕೊಡುವೆನು" ಎಂದು ಸಾರಿ ಹೇಳುವನು. ಸಭಾಜನರು ಬಂದವನು ಬ್ರಾಹ್ಮಣನೋ ಯಮನೋ ಎಂದು ಉದ್ವೇಗಗೊಳ್ಳುವರು. 'ಇದೆಂಥ ದಾನ! ಮತ್ತೇನಾದರೂ ಕೊಡು' ಎಂದು ಎನ್ನುವರು. ಮಯೂರಧ್ವಜನು ಅದನ್ನೊಪ್ಪದೆ ಕೊಯ್ಗಾರರನ್ನು ಕರೆಸಿ, ತನ್ನ ದೇಹಾರ್ಧ ದಾನದಿಂದ ವಾಸುದೇವನು ಪ್ರೀತನಾಗಲೆಂದು ಸಂಕಲ್ಪಮಾಡಿ ದೇಹವನ್ನು ಕೊಯ್ಸಿಕೊಳ್ಳಲು ಸಿದ್ಧನಾಗುವನು. ಜನರೆಲ್ಲರೂ ಬಾಹ್ಮಣನನ್ನು ಶಪಿಸುವರು. ರಾಜನು "ಇವನು ನೃಸಿಂಹನೆಂಬ ಭಾವನೆಯಿಂದ ಇವನಿಗೆ ದೇಹಾರ್ಧ ಕೊಡುವೆ. ಅವನು ಸಿಂಹಕ್ಕೇ ಕೊಡಲಿ, ಏನಾಯಿತು. ಪರೋಪಕಾರಕ್ಕಲ್ಲದ ದೇಹ ಸಣಬುರಿದ ಬೂದಿಗಿಂತ ಹೆಚ್ಚೇ?" ಎಂದು ಹೇಳಿ ಜನರನ್ನು ಸಮಾಧಾನ ಪಡಿಸುವನು.

ಆ ಹೊತ್ತಿಗೆ ರಾಜನ ಹೆಂಡತಿ ಕುಮುದ್ವತಿ, ಮಗ ತಾಮ್ರಧ್ವಜ ಇಬ್ಬರೂ ತಮ್ಮ ತಮ್ಮ ದೇಹಗಳನ್ನು ಸ್ವೀಕರಿಸುವದು ಶಾಸ್ತ್ರಕ್ಕೂ ವಿವೇಕಕ್ಕೂ ಸಂಮತವಾದೀತೆಂದೂ ಅದನ್ನು ಬ್ರಾಹ್ಮಣನು ಒಪ್ಪಬೇಕೆಂದೂ ವ ,ಸುವರು. ವೃದ್ಧ ಬ್ರಾಹ್ಮಣ 'ಕೊಡುವದಿದ್ದರೆ ರಾಜನ ದೇಹಾರ್ಧ ಕೊಡಿ, ಇಲ್ಲದಿದ್ದ್ರೆ ಹೊರಟೆ' ಎನ್ನಲು ರಾಜನು ತನ್ನ ಹೆಂಡತಿಮಕ್ಕಳಿಗೇ ತನ್ನ ದೇಹ ಕೊಯ್ಯಲು ಆಜ್ಞೆ ಮಾಡುವನು. ಕೊಯ್ಯುತ್ತಿರುವಾಗ ರಾಜನ ಎಡಗಣ್ಣೊಳಗೆ ನೀರು ಬರುವದನ್ನು ನೋಡಿ, 'ಅತ್ತು ಕೊಡುವವನ

ದಾನವೇ ಬೇಡ' ಎಂದು ಬ್ರಾಹ್ಮಣ ಹೊರಟು ಹೋಗುವನು. ತನ್ನ ಕೊಯ್ದು ತಲೆ ಹೋಳುಗಳೆರಡನ್ನು ಕೂಡಿಸಿ ಹೆಂಡತಿಗೆ ಹಿಡಿಯ ಹೇಳಿ, ಮಗನನ್ನು ಕಳುಹಿ ಬ್ರಾಹ್ಮಣನನ್ನು ಹಿಂದಕ್ಕೆ ಕರೆದು– 'ಎಲೆ ಬ್ರಾಹ್ಮಣನೇ ಎಡಗಣ್ಣಿಗೆ ನೀರು ಬಂದಕಾರಣವೆಂದರೆ– 'ಎಡ ಭಾಗವು ವ್ಯರ್ಥವಾಯಿತಲ್ಲಾ ಎಂಬುದಲ್ಲದೆ ಬೇರೆಯಿಲ್ಲ' ಎಂದು ಹೇಳಲು ವೃದ್ಧ ಬ್ರಾಹ್ಮಣನು ರಾಜನ ಭಕ್ತಿಗೆ ಮೆಚ್ಚಿ ತಾನು ಕೃಷ್ಣನಾಗಿ ಪ್ರಕಟಿಸಿಕೊಂಡು ತನ್ನ ಸಾಕಾರ ಮೂರ್ತಿಯ ಸಾಕ್ಷಾತ್ಕಾರದ ಸುಖವನ್ನು ಕೊಡಲು, ನೀಲ ಮೇಘವನ್ನು ಕಂಡು ಕುಣಿವ ನವಿಲಂತೆ ಮಯೂರಧ್ವಜ ಕುಣಿದನು. ಕೃಷ್ಣನಿಗೆ ದಂಡಪ್ರಣಾಮ ಮಾಡಿದನು. ಕುಮುದ್ವತಿ, ತಾಮ್ರಧ್ವಜರಿಗೆ ಅತ್ಯಾನಂದವಾಯಿತು. ಮಹಾಸಭೆಯು ಜಯ ಜಯ ಎಂದಿತು. ಕೃಷ್ಣನು "ನಿನ್ನ ಮಗನು ನಮ್ಮನ್ನು ಸೋಲಿಸಿದ್ದಾನೆ. ನಿನ್ನ ಯಜ್ಞವೇ ನಿಜವಾದದ್ದು. ಅದನ್ನು ಸಾಂಗಗೊಳಿಸು" ಎನ್ನುವನು ರಾಜನಿಗೆ. ಕೃಷ್ಣದರ್ಶನವಾದ ಮೇಲೆ ಯಜ್ಞ ಸಂಭ್ರಮವು ವ್ಯರ್ಥವೆಂಬ ತನ್ನ ದೃಢವಿಶ್ವಾಸವನ್ನು ರಾಜನು ಆಡಿ ತೋರಿಸುವನು. 'ತನ್ನದೆಲ್ಲವನ್ನೂ ಅರ್ಪಣ ಮಾಡಿರುವೆನು. ಧರ್ಮರಾಜನೇ ಯಜ್ಞ ಮಾಡಲಿ' ಎಂದು ತನ್ನ ಪೂರ್ಣಾರ್ಪಣ ಭಾವವನ್ನು ಮಯೂರಧ್ವಜನು ಪ್ರಕಟಿಸುವನು. ಹಸ್ತಿನಾವತಿಗೆ ಅಲ್ಲಿಯ ಎಲ್ಲ ವಸ್ತುಗಳನ್ನು ಕಳುಹಿ, ಕೃಷ್ಣನು ಎರಡು ಕುದುರೆಗಳೊಡನೆ ಮುಂದೆ ಸಾಗುವನು. (ಸಂ. ೨೬).

ಕುದುರೆ ಸಾರಸ್ವತಪುರಕ್ಕೆ ಬರುವದು. ಅಲ್ಲಿಯ ಅಸರು ವೀರವರ್ಮ. ನೀಲಧ್ವಜನಿಗೆ ಅಗ್ನಿ ಅಳಿಯನಾದಂತೆ, ವೀರವರ್ಮನ ಮಗಳು ಮಾಲಿನಿಗೆ ಮೋಹಿಸಿ ಯಮನು ಮನೆಯಳಿಯನಾಗುವನು. ಮದುವೆಯ ಕಾಲಕ್ಕೆ ಯಮನು ವೀರವರ್ಮನಿಗೆ ಬೇಗನೆ ಮೃತ್ಯು ಬರಲಿದೆಯೆಂದೂ, ಅವನು ಬೇಕಾದರೆ ಒಂದು ವರವನ್ನು ಕೇಳಿಕೊಳ್ಳಬಹುದೆಂದೂ ಹೇಳುತ್ತಾನೆ. ಮಗಳ ಕೊಟ್ಟು ವರನಿಂದ ಏನೂ ಪಡೆಯುವದು ಕನ್ಯಾಶುಲ್ಕವಾದೀತು. ಅದು ಪಾಪ; ಬೇಡ ಎನ್ನುತ್ತಾನೆ. ಆದರೂ ಯಮನ ಒತ್ತಾಯಕ್ಕೆ – ತನ್ನೂರಿಗೆ ಮಧುಸೂದನನು ಬರಬೇಕೆಂದೂ, ಅಲ್ಲಿಯ ವರೆಗೆ ತನಗೆ ಮರಣ ಬರಬಾರದೆಂದೂ, ಅದೂ ವರೆಗೆ ಯಮನೂ ಮನೆಯಳಿಯನಾಗಿ ಮನೆಯಲ್ಲಿರಬೇಕೆಂದೂ ವರ ಕೇಳಿಕೊಳ್ಳುತ್ತಾನೆ.

ಕೆಲ ಕಾಲದಮೇಲೆ ಯಜ್ಞಾಶ್ವವು ವೀರವರ್ಮನ ಪಟ್ಟಣಕ್ಕೆ ಬರುತ್ತದೆ. ವೀರವರ್ಮನೂ ವೈಷ್ಣವ. ಅದರಲ್ಲಿ ಬೇರೆ ಯಮನು ಮನೆಯಳಿಯ. ಯಥಾಪ್ರಕಾರ ಯುದ್ಧ ನಡೆಯುವದು. ಹನುಮಂತನೂ ತನ್ನ ಸಾಹಸ ಲೀಲೆಯನ್ನು ಈ ಯುದ್ಧದಲ್ಲಿ ತೋರಿಸುತ್ತಾನೆ. ಕೊನೆಗೆ ವೀರವರ್ಮನು ಕೃಷ್ಣ, ಅರ್ಜುನ, ಹನುಮಂತರ

ಮೇಲೂ ಏರಿ ಹೋಗಿ, ಹನುಮಂತನನ್ನೂ ಗುದ್ದುತ್ತಾನೆ. ಆಗ ಕೃಷ್ಣ ವೀರವರ್ಮನನ್ನು ಒದೆಯುವನು. ವೀರವರ್ಮನಿಗೇನೋ ಅದರಿಂದ ಮೂರ್ಛೆ ಬಂದರೂ, ಎದ್ದೊಡನೆ ಅವನು, 'ಕೃಷ್ಣದರ್ಶನವಾಗುವವರೆಗೂ ತನಗೆ ಮರಣವಿಲ್ಲವೆಂಬ ವರವಿದ್ದಿತು; ಇನ್ನಂತೂ ತನಗೆ ವಿಷ್ಣುವಿನ ಪರಮಪಾದದ ಸ್ಪರ್ಶವಾಯಿತು. ತನಗೆ ಮರಣವೆತ್ತಣದು?' ಎನ್ನುತ್ತಾನೆ. ಕೃಷ್ಣನಿಗೂ ಅವನನ್ನು ಕಂಡು ಕಾರುಣ್ಯವುಂಟಾಗುವದು. 'ಇವನನ್ನು ಕಂಡು ನನಗೆ ಆನಂದವಾಗಿದೆ' ಎಂದು ಪಾರ್ಥನಿಗೆ ಕೃಷ್ಣ ಹೇಳುತ್ತಾನೆ. ಪಾರ್ಥನೂ 'ನಿನಗೆ ಆನಂದ ಕೊಟ್ಟವನೇ ಜಗದಲ್ಲಿ ವಿಜಯಿ' ಎಂದು ಕೃಷ್ಣನಿಗೆ ಹೇಳಲಾಗಿ, ಆ ಮಾತನ್ನು ವೀರವರ್ಮನು ಕೇಳಿ 'ಅರ್ಜುನಾ ನಿನಗೆ ಭುಜಬಲ ಗರ್ವವಿಲ್ಲ ಎಂದ ಮೇಲೆ ನನಗೂ ಕಾಮುವೆನೆಂಬ ಛಲವಿಲ್ಲ' ಎಂದು ಹೇಳಿ ಕೃಷ್ಣನಿಗೆ ಶರಣು ಬರುತ್ತಾನೆ. ಎಲ್ಲರಿಗೂ ಆನಂದವಾಗುವದು. ಯಮನೂ ಮಾವನನ್ನು ಮುಕುಂದನಿಗೊಪ್ಪಿಸಿ ತನ್ನೂರಿಗೆ ಹೊರಡುತ್ತಾನೆ. ದೇವದೇವನೇ ಕಾಯಲಿರುವಾಗ ಕೊಲ್ಲುವ ಯಮನು ಯಾರು ? (ಸಂ, ೨೭).

ಸಾರಸ್ವತಪುರದಿಂದ ಕುದುರೆ ಕುಂತಳ ನಗರಕ್ಕೆ ಬರುವದು. ಪಾಂಡವ ಸೈನ್ಯಕ್ಕೆ ಅದು ಕಾಣದಾಗುವದು. ಅದೇ ಹೊತ್ತಿಗೆ ಅಲ್ಲಿಗೆ ಅಖಿಳ ಲೋಕಸ್ಥಿತಿ ವಿಶಾರದನಾದ ನಾರದನು ಬರುವನು. ಅವನನ್ನು ಅರ್ಜುನ ಕುದುರೆಯ ಬಗ್ಗೆ ಕೇಳಲು, ಅದನ್ನು ಚಂದ್ರಹಾಸರಾಜನು ಕಟ್ಟಿಹಾಕಿರುವನೆಂದೂ, ಅವನಂಥ ಬಲಿಷ್ಠರು ಯಾರೂ ಇಲ್ಲವೆಂದೂ, ಅವನು ಪರಮ ವೈಷ್ಣವನೆಂದೂ ತಿಳಿಸುವನು. ಆಗ ಅರ್ಜುನನು ಅವನ ಕತೆಯನ್ನು ಕೇಳುವ ಕುತೂಹಲ ವ್ಯಕ್ತಮಾಡುತ್ತಾನೆ. ಮಹಾಭಾರತ ಯುದ್ಧರಂಗದಲ್ಲಿ ಮಹಾಗೀತೆಯನ್ನು ಕೇಳಲು ಸಿದ್ಧನಾದವನು ಚಂದ್ರಹಾಸನ ಚಿಕ್ಕ ಕತೆಯನ್ನು ಕೇಳಲು ಹಿಂದೆಗೆಯುವನೇ ? ನಾರದನು ಚಂದ್ರಹಾಸನ ಕಥೆಯನ್ನು ಹೇಳುತ್ತಾನೆ. ಜೈಮಿನಿ ಅಶ್ವಮೇಧದೊಳಗಿನ ಎಲ್ಲ ಕಥೆಗಳಿಗಿಂತ ಇದು ರಮ್ಯವು, ವಿಸ್ತಾರವಾದದ್ದೂ ಆಗಿದೆ. ಚಂದ್ರಹಾಸ ದೈವದ ವರಪುತ್ರ. ಅವನ ಪೌರುಷವೆಲ್ಲ ಪುರುಷೋತ್ತಮನ ಸದಾನುಸಂಧಾನದಲ್ಲಿದೆ. ಭಾಗವತ ಭಕ್ತಿಯ ರಹಸ್ಯವನ್ನು ಅದ್ಭುತ ಕಥೆಯಾಗಿ ಜೈಮಿನಿ ಮಾರ್ಪಾಟು ಮಾಡಿದ್ದಾನೆ. ಕಥೆ ಹೀಗಿದೆ:-

ಕೇರಳ ದೇಶದರಸನಿಗೆ ಮೂಲಾನಕ್ಷತ್ರದ ಅರಿಷ್ಟಾಂಶದಲ್ಲಿ ಕಾಲಿಗೆ ಆರು ಬೆರಳಾದ ಮಗನೊಬ್ಬನು ಹುಟ್ಟುತ್ತಾನೆ. ಮಗ ಹುಟ್ಟಿದ ಕೆಲ ದಿನಗಳಲ್ಲಿಯೇ ಶತ್ರುಗಳು ರಾಜಧಾನಿಗೆ ಮುತ್ತಿಗೆ ಹಾಕುತ್ತಾರೆ. ಯುದ್ಧದಲ್ಲಿ ರಾಜ ಸಾಯುತ್ತಾನೆ. ರಾಣಿ ಸತಿ ಹೋಗುತ್ತಾಳೆ. ರಾಜ್ಯ ಶತ್ರುಗಳ ವಶವಾಗುತ್ತದೆ. ದಾದಿಯೊಬ್ಬಳು

ರಾಜಪುತ್ರನನ್ನು ಅಡಗಿಸಿ ಕರೆದುಕೊಂಡು ಕುಂತಳರಾಜ್ಯವನ್ನು ಸೇರುತ್ತಾಳೆ. ಕೆಲ ದಿನ ಸಾಕಿ, ಆಕೆಯೂ ಕಾಲವಶಳಾಗುತ್ತಾಳೆ. ಸತ್ತವರ ಮಕ್ಕಳು ಇದ್ದವರ ಕೈಯಲ್ಲಿ ಬೆಳೆಯುವಂತೆ ಈ ಕೋಗಿಲ ಮರಿಯು ಪರದೇಶಿಯಾಗಿಯೇ ಊರವರೆಲ್ಲರ ಕರುಣಾ ಪಾತ್ರವಾಗಿ ಬೆಳೆಯುತ್ತದೆ. ತನಗೆ ಸಿಕ್ಕ ಒಂದು ಸಾಲಗ್ರಾಮ ಶಿಲೆಯನ್ನೇ ಗೋಲಿ ಗುಂಡುಮಾಡಿ, ಬಾಲರನ್ನು ಜಯಿಸಿ, ಊಟ ಬಿಟ್ಟು ಉಳಿದ ಹೊತ್ತಿನಲ್ಲೆಲ್ಲ ತನ್ನ ಬಾಯಲ್ಲಿರಿಸಿಕೊಂಡು ಅವನು ಐದು ವರ್ಷದವನಾಗಿ ಬೆಳೆಯುತ್ತಾನೆ.

ಒಮ್ಮೆ ಕುಂತಳನಗರದ ಮಂತ್ರಿ ದುಷ್ಟಬುದ್ಧಿಯ ಮನೆಯಲ್ಲಿ ವಿಪ್ರಸಂತರ್ಪಣೆಯಾಗಿದೆ, ಊಟವಾಗಿ ಬ್ರಾಹ್ಮಣರು ಹರಸಿ ಕುಳಿತಿದ್ದಾರೆ. ಅಲ್ಲಿಯೇ ಈ ಹುಡುಗ ಬೀದಿಮಕ್ಕಳೊಡನೆ ಆಡುತ್ತಿದ್ದಾನೆ. ಬ್ರಾಹ್ಮಣರಿಗೆ ಅವನ ರಾಜಲಕ್ಷಣ ಕಣ್ಣಿಗೆ ಬೀಳುವದು. ಅವರು ದುಷ್ಟಬುದ್ಧಿಗೆ ಈ ಹುಡುಗನು ಯಾರು ಎಂದು ಕೇಳುತ್ತಾರೆ. ಈ ಬಗೆಯ ಹುಡುಗರು ಎಷ್ಟು ಜನರೋ ಈ ಊರಲ್ಲಿ! ಎಂದು ದುಷ್ಟಬುದ್ಧಿ ತೇಲಿಸಿ ಮಾತನಾಡುತ್ತಾನೆ. ಬ್ರಾಹ್ಮಣರೋ 'ಎಂದಿಲ್ಲ ಒಂದು ದಿನ ಈ ಹುಡುಗ ಈ ನಾಡಿಗೇ ಅರಸನಾಗುವದು ನಿಶ್ಚಯ; ಇವನನ್ನು ಸಾಕು' ಎಂದು ಹೇಳುತ್ತಾರೆ. 'ಹಾಗೇ ಆಗಲಿ' ಎನ್ನುವವನಂತೆ ಹೊರಗೆ ನಟಿಸಿ, ದುಷ್ಟಬುದ್ಧಿ ಆ ಹುಡುಗನನ್ನು ಇಲ್ಲದಾಗಿಸಲು ಹಂಚಿಕೆ ಹಾಕುತ್ತಾನೆ. ದೈವದ ವಿರುದ್ಧ ಹೊಂಚು ಹಾಕುವವರ ಮರುಳಿಗಿಂತ ನಗೆಗೇಡು ಬೇರೆ ಯಾವುದೂ ಇಲ್ಲ. ಹುಡುಗ ರಾಜನಾಗುವದೇ ನಿಜವಾದರೆ ಅವನು ಮೊದಲೇ ಸಾಯುವದು ಸಾಧ್ಯವೆಂತು ಎಂಬುದು ದುಷ್ಟಬುದ್ಧಿಯ ಅರಬುದ್ಧಿಗೆ ಹೊಳೆಯುವದಿಲ್ಲ. ಕೊಲ್ಲುವದು ಸಾಧ್ಯವಿದ್ದರೆ ಅರಸನಾಗುವದು ಸುಳ್ಳಿರಬೇಕು. ಅರಸನಾಗುವದು ಸುಳ್ಳಾಗಬಹುದಾದರೆ ಕೊಲ್ಲುವದು ಅನಗತ್ಯ. ದೈವವನ್ನು ಇದಿರು ಕಟ್ಟಿಕೊಂಡು ಪೌರುಷವೆಸಗುವ ಧೃಷ್ಟಬುದ್ಧಿ (ಮೂಲ ಜೈಮಿನಿಯಲ್ಲಿ ಇದೇ ಹೆಸರಿದೆ) ಗಳಿಗೆ ಈ ತರ್ಕ ಹೊಳೆಯುವದಿಲ್ಲ. ಹುಡುಗ ಬದುಕದೇ ಇದ್ದರೆ ರಾಜನಾಗುವದೆಂತು? ತನ್ನ ಮನೆತನಕ್ಕೆ ರಾಜಪದವಿ ಬರಬೇಕು. ರಾಜನಿಗಂತೂ ಗಂಡುಸು ಮಕ್ಕಳಿಲ್ಲ. ಸಾಕು. ಅದಕ್ಕೆ ವಿರುದ್ಧವಾಗಿ ತೋರಿದವರನ್ನೆಲ್ಲ ಸವರುವದೊಂದೆ ಪೌರುಷದ ಪರಮಾವಧಿಯಾಗುವದು ಧೃಷ್ಟಬುದ್ಧಿಗಳಿಗೆ!

ದುಷ್ಟಬುದ್ಧಿ ಕೊಲೆಗಡಕರಿಗೆ ಹೇಳಿ ಆ ಹುಡುಗನನ್ನು ಕೊಲ್ಲಿಸಲೆಳಿಸುತ್ತಾನೆ. ಅವರು ಹುಡುಗನನ್ನು ದೂರದಡವಿಗೆ ಒಯ್ಯುತ್ತಾರೆ. ಕೊಲ್ಲಲೂ ಸಿದ್ಧರಾಗುತ್ತಾರೆ. ಆದರೆ ಸಾಲಗ್ರಾಮ ಮಹಿಮೆಯಿಂದ ಅವನು 'ಮುರಹರ, ಕೃಷ್ಣ. ಸಲಹು' ಎಂದು ಕೂಗಿಕೊಳ್ಳುತ್ತಾನೆ. ಕಟುಕರಿಗೂ ಕರುಣೆ ಬರುತ್ತದೆ. ಅವರು ಅವನ ಆರನೆ

ಬೆರಳನ್ನೇ ಕೋಲೆಯ ಕುರುಹೆಂದು ಕೊಯ್ದುಕೊಂಡು, ಹುಡುಗನನ್ನು ಬಿಟ್ಟು ಹೋಗುತ್ತಾರೆ. ಅಲ್ಲಿಯ ಮೃಗಪಕ್ಷಿಗಳು ಅವನ ಆರೈಕೆ ಮಾಡುತ್ತವೆ. ಆ ಕಾಲಕ್ಕೆ ಅಲ್ಲಿಗೆ ಕುಳಿಂದನೆಂಬೊಬ್ಬ ಅರಸು ಬೇಟೆಗಾಗಿ ಬರುತ್ತಾನೆ; ಅಲ್ಲಿ ದೇವರ ಹೆಸರಿನಿಂದ ಕೂಗುವ ಈ ಮಗುವನ್ನು ನೋಡುತ್ತಾನೆ. ಅವನಿಗೂ ಮಕ್ಕಳಿರುವದಿಲ್ಲ. 'ಪಾಪಕ್ಕೆ ಬಂದು ಪುಣ್ಯ ಲಭಿಸಿತಲ್ಲಾ' ಎಂದು ಕುಳಿಂದ ಆ ಮಗುವನ್ನೆತ್ತಿಕೊಂಡು ತನ್ನ ನಗರಿಗೆ ಹೋಗುತ್ತಾನೆ.

ಕುಳಿಂದನ ಹೆಂಡತಿ ಮೇಧಾವಿನಿ ಮಾತೃವಾತ್ಸಲ್ಯದಿಂದ ಮಗುವನ್ನು ಎತ್ತಿ 'ತನ್ನ ಬಂಜೆತನ ಹೋಯಿತು' ಎಂದು ಆನಂದಬಡುತ್ತಾಳೆ. ಮಗುವಿಗೆ ಚಂದ್ರಹಾಸನೆಂದು ನಾಮಕರಣವಾಗುತ್ತದೆ. ಮುಂದೆ ಹುಡುಗ, ಅಕ್ಷರಾಭ್ಯಾಸ ನಡೆದಾಗ 'ಹರಿ' ಎಂಬೆರಡು ವರ್ಣಗಳಲ್ಲದೆ ಉಳಿದ ಅಕ್ಷರಗಳನ್ನೇ ನೋಡುವದಿಲ್ಲ. ಚಿಕ್ಕಂದಿನಿಂದಲೇ ಏಕಾದಶಿ ವ್ರತಪಾಲನೆ ಮಾಡುತ್ತಾನೆ. ತನ್ನ ಗೆಳೆಯರೊಡನೆಯೂ ವಿಷ್ಣು ಭಕ್ತಿಯ ಆಟವನ್ನೆ ಆಡುತ್ತಾನೆ. ದೊಡ್ಡವನಾಗಿ ವಿದ್ಯೆ ಕಲಿತು– 'ಹರಿಯೇ ಸರ್ವ' ವೆಂದು ತಿಳಿಯುತ್ತಾನೆ. ತನ್ನ ಭಕ್ತಿಯ ಬಿಲ್ಲಿಗೆ ತನ್ನ ಸಾತ್ವಿಕ ಗುಣದ ಹೆದೆಮಾಡಿ ಸುಬುದ್ಧಿಯ ಬಾಣ ಹೂಡಿ, ಕೃಷ್ಣನನ್ನೆ ಗುರಿಮಾಡಿ ಭಾಗವತ ಧನುರ್ವಿದ್ಯೆಯ ಅಭ್ಯಾಸ ಮಾಡುತ್ತಾನೆ. ಹದಿನಾರನೆಯ ವರ್ಷಕ್ಕೆ ಸುತ್ತಲೆಲ್ಲೂ ದಿಗ್ವಿಜಯ ಮಾಡಿಕೊಂಡು ಬರುತ್ತಾನೆ. ತನ್ನ ಸಾಕು ತಾಯಿತಂದೆಗಳನ್ನೆ ಲಕ್ಷ್ಮೀನಾರಾಯಣರೆಂದು ಭಜಿಸುತ್ತಾನೆ. ಕುಳಿಂದನ ರಾಜಧಾನಿ ಚಂದನಾವತಿಯು ಸಕಲ ಸಂಪತ್ತಿನಿಂದ ತುಳುಕಾಡುವದು. ಪ್ರಜೆಗಳೆಲ್ಲರೂ ರಾಜನಂತೆ ವೈಷ್ಣವ ಭಕ್ತಿಯಲ್ಲಿ ಸಂಪನ್ನರಾಗುತ್ತಾರೆ.

ಕುಳಿಂದ ದುಷ್ಟಬುದ್ಧಿಗೆ ಆಧೀನನಾದ ರಾಜ. ಮಂತ್ರಿಗೆ ಕಳಿಸಬೇಕಾದ ಸಿದ್ಧಾಯದ ನೆನಪು ಒಮ್ಮೆ ಕುಳಿಂದನಿಗಾಗುತ್ತದೆ. ಚಂದ್ರಹಾಸನೂ ತಂದೆಯ ಮತದಂತೆ ರಾಜದೂತರಿಂದ ಕುಂತಳನಗರಕ್ಕೆ ಕಪ್ಪಕಾಣಿಕೆ ಕಳುಹಿಕೊಡುತ್ತಾನೆ. ಆ ದೂತರಿಂದ ಚಂದ್ರಹಾಸನ ವೃತ್ತಾಂತ ಕೇಳಿ ದುಷ್ಟಬುದ್ಧಿಗೆ ಸಂಶಯ ಬರುತ್ತದೆ. ಕೂಡಲೇ ಅವನು ಅರಸನಪ್ಪಣೆಪಡೆದು, ಮಗನಾದ ಮದನನಿಗೆ ರಾಜಕಾರ್ಯ ವಹಿಸಿಕೊಟ್ಟು ಚಂದನಾವತಿಗೆ ಹೊರಡುತ್ತಾನೆ. ಆ ಹೊತ್ತಿಗೆ ಅವನ ಮಗಳು ವಿಷಯೆ, ತನ್ನ ಆಟದ ತೋಟದೊಳಗಿನ ಚೂತಲತೆಗೆ ಹೂಬಿಟ್ಟಿದೆ. ಇನ್ನು ಉದ್ಯಾಪನ ಬೇಡವೇ ? ಎಂದು ಸ್ತ್ರೀಸಹಜವಾದ ಪಟುತ್ವದಿಂದ ಪ್ರಶ್ನೆಮಾಡುತ್ತಾಳೆ. ಮಂತ್ರಿಯೂ ಭಾವವನ್ನು ತಿಳಿದು ಮದನನಿಗೆ ಉಳಿದ ಕೆಲಸ ಹೇಳಿ ಚಂದನಾವತಿಗೆ ಬರುತ್ತಾನೆ.

ಕುಳಿಂದನ ರಾಜ್ಯವೊ 'ಕಾಡೆಲ್ಲ ನಾಡಾಗಿ' ಶೋಭಿಸುತ್ತಿದೆ. ದುಷ್ಟಬುದ್ಧಿ ಚಂದ್ರಹಾಸನನ್ನು ನೋಡಿ, ಚಂಡಾಲರು ತನ್ನನ್ನು ವಂಚಿಸಿದರೆಂದು ಮನದೊಳಗೆ ತಿಳಿದುಕೊಳ್ಳುತ್ತಾನೆ. ಆದರೆ ಬುದ್ಧಿಕಲಿಯುವದಿಲ್ಲ. ದೈವದ ವಿರುದ್ಧ ತನ್ನ ದ್ವಿತೀಯ ಪ್ರಯೋಗವನ್ನು ಮಾಡುತ್ತಾನೆ. ಚಂದ್ರಹಾಸನಲ್ಲಿ ದುಷ್ಟಬುದ್ಧಿಗೆ ಆಗತಕ್ಕ ಉಪಚಾರವಾಗುತ್ತದೆ. ಆದರೆ ದುಷ್ಟಬುದ್ಧಿಗೆ ಒಂದೆ ಚಿಂತೆ – ತನ್ನ ಮಕ್ಕಳಿಗೆ ನಿಷ್ಕಂಟಕ ರಾಜ್ಯಪ್ರಾಪ್ತಿ ಹೇಗಾದೀತು ? ವಿಷ್ಣುಭಕ್ತನನ್ನು ಕೊಲ್ಲಿಸಿ ತಾನು ಬಾಳುವನೆಂದು ದುಷ್ಟಬುದ್ಧಿ ಹೇಗೆ ಲೆಕ್ಕಹಾಕಿದನೋ ! ಅವನೊಂದು ಪತ್ರ ಬರೆಯುತ್ತಾನೆ. ಚಂದ್ರಹಾಸನನ್ನು ಕರೆದು 'ಇದು ಬಹಳ ಗುಪ್ತಕಾರ್ಯ. ನೀನೊಬ್ಬನೆ– ( ಸೇವಕರು ಒಬ್ಬಿಬ್ಬರು ಜೊತೆಗಿರಬಹುದು ) ಈ ಲೇಖನವನ್ನೊಯ್ದು ತನ್ನ ಮಗ ಮದನನಿಗೆ ಕೊಡಬೇಕು. ಮುದ್ರೆಯೊಡೆಯಬಾರದು' ಎಂದು ಹೇಳುತ್ತಾನೆ. ದೈವಪುತ್ರನಿಗೆ ಹೆದರಿಕೆ ಯಾವುದು ? ಚಂದ್ರಹಾಸ ತಂದೆತಾಯಿಗಳ ಅಪ್ಪಣೆ ಹರಕೆ ಪಡೆದು ಹೊರಡಲನುವಾಗುತ್ತಾನೆ. ತಾಯಿ 'ಅನುಕೂಲೆಯಾಗಿ ವಧೂಸಮನ್ವಿತನಾಗಿಹ ರಾಜ್ಯಮಂ ಪಡೆ' ಎಂದು ಆಶೀರ್ವದಿಸುತ್ತಾಳೆ. ಹಾದಿಗುಂಟ ಅನೇಕ ಶುಭಶಕುನಗಳಾಗುತ್ತವೆ. ಕುದುರೆಯೇರಿದ ಚಂದ್ರಹಾಸ ಬೇಗನೆ ಕುಂತಳನಗರದ ಉಪವನಕ್ಕೆ ಬಂದು ಬಳಲಿಕೆಯಿಂದ ವಿಶ್ರಮಿಸುತ್ತಾನೆ; ಹರಿಪೂಜೆಯನ್ನು ಮಾಡಿ, ತಂದ ಪಾಥೇಯವನ್ನು ಭುಂಜಿಸಿ, ಮಾವಿನ ನೆರಳಿಗೆ ಒರಗಿ, ಆತ್ಮೀಯ ಕೃತ್ಯವನ್ನು ಮರೆತು ನಿದ್ದೆ ಹೋಗುತ್ತಾನೆ ಚಂದ್ರಹಾಸ.

ಆ ಉಪವನಕ್ಕೆ ಊರ ಅರಸನ ಮಗಳು ಚಂಪಕಮಾಲಿನಿ ಮತ್ತು ಮಂತ್ರಿಯ ಮಗಳಾದ ವಿಷಯೆ ಉಳಿದ ಸಖಿಯರೊಡನೆ ಜಲಕ್ರೀಡೆಗೆ ಬರುತ್ತಾರೆ. ಕ್ರೀಡೆಯಾದಮೇಲೆ ಮಧುಪಾನಮತ್ತೆಯರಾಗಿ, ಅವರು ಪುಷ್ಪಾಪಚಯಕ್ಕೆ ಹೊರಡುತ್ತಾರೆ. ವಿಷಯೆ ಮಾಮರದ ನೆರಳಲ್ಲಿ ನಿದ್ದೆಹೋದ ಚಂದ್ರಹಾಸನನ್ನು ಕಂಡು ಮೋಹಿತಳಾಗಿ ಅವನ ಹತ್ತಿರ ಹೋಗಿ ಅವನ ಕಂಚುಕದ ಸೆರಗಿನೊಳಗಿನ ಪತ್ರಿಕೆಯನ್ನು ತೆಗೆದು, ಮುದ್ರೆಯೊಡೆದು, ಲವಲವಿಕೆಯಿಂದ ಅದನ್ನು ಓದಿ ನೋಡುತ್ತಾಳೆ. ಸಾಭಿಪ್ರಾಯ ಸಂಧಿಗಳಿಂದಲೂ, ಸವ್ಯಂಗ್ಯಶ್ಲೇಷಗಳಿಂದಲೂ ಕೂಡಿದ ಆ ಪತ್ರಿಕೆಯ ಅರ್ಥವು ಮೋಹಿತಳಾದ ವಿಷಯೆಗೆ ಬೇರೆಯಾಗಿಯೇ ಹೊಳೆಯುವದು. 'ವಿಧಿಕೃತವನು ಉಲ್ಲಂಘಿಸುವರುಂಟೇ ?' ಉಳಿದ ಮಾತುಗಳನ್ನೆಲ್ಲ ವ್ಯರ್ಥವಾಗಿ ಬರೆದು, ಕೈತಪ್ಪಿ ಬರೆದನೋ ಏನೋ ಎಂಬಂತೆ,–ಆದರೆ ಆ ಸ್ಪಷ್ಟಪದದಿಂದಲೆ ಉಳಿದ ವಾಕ್ಯಕ್ಕೆ ನಿಶ್ಚಿತಾರ್ಥ ಹುಟ್ಟುವಂತೆ 'ವಿಷವ ಮೋಹಿಸುವಂತೆ ಕೊಡುವದೀತಂಗೆ' ಎಂದು ಬರೆದ ಬರೆಹವನ್ನು ದುಷ್ಟಬುದ್ಧಿಯ ಮಗಳೆ, ವರ್ಣಪಲ್ಲಟದ ಮೋಸವೆಂದು ಬಗೆದು 'ವಿಷವ'

ಎಂಬುದನ್ನು 'ವಿಷಯೆ' ಎಂದು ತಿದ್ದುತ್ತಾಳೆ. ಗೆಳೆತಿಯರ ಕಡೆಗೆ ಹಿಂದಿರುಗುತ್ತಾಳೆ. ಮನೆಗೆ ಬರುತ್ತಾಳೆ. ವಿರಹ ವ್ಯಥೆಯಿಂದೆ ತಳಮಳಿಸುತ್ತಾಳೆ.

ಚಂದ್ರಹಾಸ ಎದ್ದು, ಅಪರಾಣ್ಣಕಾಲಕ್ಕೆ ಊರ ಸೇರುತ್ತಾನೆ. ಆ ನಾಡಿನ ರಾಜನೊ ಸದಾನಂದಯೋಗದಲ್ಲಿ ಧ್ಯಾನಪರನಾಗಿ, ದುಷ್ಟಬುದ್ಧಿಗೆ ರಾಜ್ಯ ಒಪ್ಪಿಸಿರುತ್ತಾನೆ. ದುಷ್ಟಬುದ್ಧಿಯ ಮಗ ಮದನನು ಮಾತ್ರ ಹರಿಹರ ಭಕ್ತ. ಅವನ ಓಲಗದಲ್ಲಿ 'ಕೃಷ್ಣಚಾರಿತ್ರ' ವನ್ನು ರಚಿಸುವ ಭಾವಕರಿದ್ದಾರೆ. ಅವನ ಅರಮನೆಯ ಏಳನೆಯ ಬಾಗಿಲನ್ನು ಕಾಯಲು ಶ್ರದ್ಧಾಯಷ್ಟಿ ಹಿಡಿದ ವಿವೇಕನೆಂಬ ದ್ವಾರಪಾಲಕನಿದ್ದಾನೆ. ದುಷ್ಟಬುದ್ಧಿ ಊರಲ್ಲಿಲ್ಲದ್ದರಿಂದ ಹರಿಹರಭಕ್ತನಾದ ಮದನನು ಓಲಗದಲ್ಲಿರುವನು. ಚಂದ್ರಹಾಸ ಅಲ್ಲಿಗೆ ಬಂದು ಅವನಿಗೆ ಅವನ ತಂದೆ ಅತಿ ರಹಸ್ಯವೆಂದು ಕೊಟ್ಟ ಕುರುಹಿನ ಮುದ್ರೆಸಹಿತವಾದ ಪತ್ರವನ್ನು ಕೊಡುತ್ತಾನೆ. ಮದನ ಅದನ್ನೋದಿಕೊಂಡು ತಿದ್ದಿದಕ್ಷರ ತಿಳಿಯದೆ, ಇದ್ದುದೆಲ್ಲ ನಿಜವೆಂದು ತಿಳಿದು, 'ಹೊತ್ತುಗಳೆಯದೆ' ಕೆಲಸ ಮಾಡಬೇಕೆಂಬ ತಂದೆಯ ಅಭಿಪ್ರಾಯವನ್ನು ಮನದಂದು, 'ಕೃಷ್ಣಭಕ್ತ' ನೆಂದ ಮೇಲೆ ವಿಚಾರಿಸುವದೇನೆಂದು ವಿವೇಕಮಾಡಿ ತಂದೆಯ ಹಾದಿ ನೋಡದೆ ವಿವಾಹವನ್ನು ನೆರವೇರಿಸಿ ಬಿಡುತ್ತಾನೆ. ಪಾಣಿಗ್ರಹಣ, ಲಾಜಾಹೋಮಾದಿಗಳು ಸಾಂಗವಾಗಿ ನೆರವೇರುವವು. ದಂಪತಿಗಳ ಸಹಭೋಜನವೂ ಮುಗಿಯುವದು. ಭಂಡಾರದ ಅಖಿಲ ವಸ್ತುಗಳನ್ನೂ ತೃಣವಾಗಿ ವೆಚ್ಚಮಾಡಿ ಮದನ ಸಮಸ್ತ ಜನರನ್ನು ತೃಪ್ತಿಪಡಿಸುವನು.

ಇತ್ತ ದುಷ್ಟಬುದ್ಧಿ ಚಂದನಾವತಿಯಲ್ಲಿ ಕುಳಿಂದನನ್ನು ಸೆರೆಯಲ್ಲಿ ಹಾಕುವನು. ಮಗನೇನು ಮಾಡಿರುವನೋ ಎಂಬ ಚಿಂತೆಯಲ್ಲಿ ಕುಂತಳನಗರಕ್ಕೆ ಬರುವನು. ಒಂದು ಸರ್ಪವು 'ನಿನ್ನ ಮನೆಯ ಒಡವೆಯನ್ನು ಇದುವರೆಗೂ ಕಾದಿದ್ದೆ ಈಗ ಹೊರಟೆ' ಎಂದು ಹಾದಿಯಲ್ಲೆ ಅವನಿಗೆ ಹೇಳುವದು. ಊರಿಗೆ ಬಂದು ನೋಡುತ್ತಾನೆ. ವಿಜೃಂಭಣೆಯಿಂದ ವಿವಾಹೋತ್ಸವ ಸಾಗಿದೆ. ದುಷ್ಟಬುದ್ಧಿ ಅಂದಣದಿಂದಿಳಿದವನೇ ಮನೆ ಹೊಕ್ಕು ಮಗನ ಮೊದಲುಗೊಂಡು ಮದುಮಕ್ಕಳವರೆಗೆ ಎಲ್ಲರಿಗೂ ಬಯ್ಯುವನು. ಬೆಕ್ಕು ಗಿಳಿಮರಿ ನೋಡುವಂತೆ ಮಗಳನ್ನೂ ಅಳಿಯನನ್ನೂ ಕಣ್ಣರಳಿಸಿ ಕಾಣುವನು. ಮಗನ ಮಾತಿನ ಅರ್ಥವೇ ಅವನಿಗಾಗುವದಿಲ್ಲ. ಏತರಿಂದ ಹೀಗಾಗಿರಬೇಕು ಅವನಿಗೆ ತಿಳಿಯುವದಿಲ್ಲ. ಬ್ರಾಹ್ಮಣರು ಹಿಂದೆ ಹೇಳಿದ ಮಾತು ನಿಜ—ಎಂದುಕೊಳ್ಳುತ್ತಾನೆ. ಆದರೆ ವಿಷಮ ಬುದ್ಧಿ ತಪ್ಪುವದಿಲ್ಲ. ದೈವದ ವಿರುದ್ಧ ಮೂರನೆಯ ಪ್ರಯೋಗಕ್ಕೆ ಕೈ ಇಕ್ಕುತ್ತಾನೆ. ಮೂರಕ್ಕೆ ಮುಕ್ತಿಯಲ್ಲವೆ! ದುಷ್ಟಬುದ್ಧಿ ಚಂದ್ರಹಾಸನನ್ನು ಕರೆದು ಮದುವೆಯ ನಾಲ್ಕನೆಯ ದಿನ ಊರ ಹೊರ

ಗಿನ ಚಂಡಿಕಾಲಯಕ್ಕೆ ಹೋಗುವದು ನಮ್ಮ ಕುಲಾಚಾರ, ನೀನು ಹೋಗಿ ಬರ ಬೇಕು–ಎನ್ನುತ್ತಾನೆ. ಚಂಡಾಲರನ್ನು ಕರೆದು (ಹಿಂದಿನಂತೆ ಮಾಡಬಾರದೆಂದು ಎಚ್ಚರಗೊಟ್ಟು) 'ಇಂದು ಸಂಜೆ ಚಂಡಿಯ ಗುಡಿಗೆ ಪೂಜೆಗೆ ಬರುವ ಒಬ್ಬನನ್ನು ನೀವು ಕೊಂದು ಬಿಡಬೇಕು' ಎಂದು ಆಜ್ಞಾಪಿಸುತ್ತಾನೆ.

ಈ ಹೊತ್ತಿಗೆ ಕುಂತಳನಗರದರಸು ತನ್ನ ಛಾಯೆ ತಲೆಯಿಲ್ಲದ್ದನ್ನು ಕಂಡು, ಮರಣ ಸಮೀಪಿಸಿತೆಂದು ನಿಶ್ಚಯಿಸಿ, ವನವಾಸಕ್ಕೆ ಹೋಗಲು ಸಿದ್ಧನಾಗುತ್ತಾನೆ. ಮಗಳನ್ನೂ, ರಾಜ್ಯವನ್ನೂ ಯಾರಿಗೆ ಕೊಡಬೇಕೆಂದು ತನ್ನ ಪುರೋಹಿತನಾದ ಗಾಲವನಿಗೆ ಕೇಳುತ್ತಾನೆ. ಅವನು ಚಂದ್ರಹಾಸನಿಗೆ ಕೊಡಬೇಕು ಎಂದು ಹೇಳಿದಮೇರೆಗೆ ಮದನನ್ನು ಕರೆಸಿ ಚಂದ್ರಹಾಸನನ್ನು ಕರೆತರಲು ಕಿವಿಯಲ್ಲಿ ಹೇಳುತ್ತಾನೆ. ಚಂದ್ರಹಾಸ ಪೂಜಾದ್ರವ್ಯದೊಡನೆ ಚಂಡಿಕಾ ಪೂಜೆಗೆ ಹೊರಟಿದ್ದಾನೆ. ಮದನ 'ಕುಲಾಚಾರ ನಾನು ಮಾಡಿಕೊಂಡು ಬರುತ್ತೇನೆ, ನೀನು ಅರಸನ ಕಡೆಗೆ ಹೋಗು. ಅವರು ಹೇಳಿ ಕಳುಹಿದ್ದಾರೆ' ಎಂದು ಅವನನ್ನು ಅರಸನೆಡೆಗೆ ಕಳುಹಿ ತಾನು ಚಂಡಿಕಾಲಯಕ್ಕೆ ಹೋಗುತ್ತಾನೆ. ಕೊಲೆಗಡಕರು ಆಜ್ಞಾಪ್ರಕಾರವಾಗಿ ಗುಡಿಗೆ ಬಂದವನ ಕೊಲೆ ಮಾಡುತ್ತಾರೆ. ಮದನ 'ಮಾಧವಸ್ಮರಣೆ' ಯಿಂದ ಪ್ರಾಣ ಬಿಡುತ್ತಾನೆ. ಇತ್ತ ಚಂದ್ರಹಾಸನೊಡನೆ ಗಾಂಧರ್ವವಿಧಿಯಿಂದ ಚಂಪಕಮಾಲಿನಿಯ ಲಗ್ನವಾಗುತ್ತದೆ. ಅದೇ ಗೋಧೂಳಿಲಗ್ನದಲ್ಲಿ ಸಂಸಾರ ಸಾಧನವೆಲ್ಲ ತೊರೆದು ಸಮ್ಯಕ್‌ಜ್ಞಾನ ಬೋಧಿತದ ಯೋಗವನ್ನು ಕೈಕೊಂಡು ಅರಣ್ಯವಾಸಕ್ಕೆ ಅರಸ ಹೊರಡುತ್ತಾನೆ. ಬ್ರಾಹ್ಮಣರ ಹೇಳಿಕೆಯಂತೆ, ಚಂದ್ರಹಾಸ ನಾಡಿನ ಅರಸನಾಗುತ್ತಾನೆ. ಚಂದ್ರಹಾಸ ಚಂಪಕಮಾಲಿನಿಯೊಡನೆ ಸಮಸ್ತ ವೈಭವದಿಂದ ನಗರದಲ್ಲಿ ಮೆರವಣಿಗೆಗೆ ಹೊರಡುತ್ತಾನೆ. ಈ ಉತ್ಸವದ ವಾದ್ಯಧ್ವನಿ ಕೇಳಿ ದುಷ್ಟಬುದ್ಧಿಗೆ ದಿಗಿಲಾಗುತ್ತದೆ. ತನ್ನನ್ನು ಕೇಳದೆ ಅರಸನು ಇದನ್ನೇನು ಮಾಡಕೊಂಡನು ಎನ್ನುತ್ತಾನೆ. ಮಗನಿಗೆ ಬಯ್ಯುತ್ತಾನೆ. ಚಂದ್ರಹಾಸನೊ, ಚಂಪಕಮಾಲಿನಿಯೊಡನೆ ಆನೆಯಿಂದಿಳಿದು ಮಾವನಾದ ದುಷ್ಟಬುದ್ಧಿಗೆ ನಮಿಸುತ್ತಾನೆ. ದುಷ್ಟಬುದ್ಧಿ ಸಿಟ್ಟಿಗೆದ್ದು ತಾನು ಹೇಳಿದಂತೇಕೆ ಚಂದ್ರಹಾಸ ಚಂಡಿಕಾಲಯಕ್ಕೆ ಹೋಗಲಿಲ್ಲ ಎಂದು ಕೇಳಲಾಗಿ, ಆದ ಸಂಗತಿಯನ್ನು ಚಂದ್ರಹಾಸ ಅವನಿಗೆ ಹೇಳುತ್ತಾನೆ. "ಪರಹಿಂಸೆ ಮಾಡಿದ ಮಾನವ ಬಾಳುವನೇ? ದೀಪವನ್ನು ಕೆಡಿಸ ಹೋಗುವ ಪತಂಗದಂತೆ ನಮ್ಮ ಉಪಾಯ ನಮಗೆ ಅಪಾಯವಾಯಿತಲ್ಲಾ!" ಎಂದು ದುಷ್ಟಬುದ್ಧಿ ಉಮ್ಮಳಿಸುವನು. ಒಬ್ಬನೆ ಚಂಡಿಕಾಲಯದತ್ತ ಹೊರಡುವನು. ಹಾದಿಯಲ್ಲಿ ಸುಡುಗಾಡೊಳಗಿನ ಭೂತಗಳು ದುಷ್ಟಬುದ್ಧಿಯಂಥ ಭೂತಗಳು ತಮ್ಮಲ್ಲಿಲ್ಲವೆಂದು ಮೂದಲಿಸುವವು. ಗುಡಿಗೆ ಬಂದು ನೋಡುತ್ತಾನೆ ದುಷ್ಟಬುದ್ಧಿ; ಮಗ

ಮೀಸೆಮುರಿದು ಬಿದ್ದಿದ್ದಾನೆ ಸತ್ತ ಮಗನಿದಿರು. ದುಷ್ಟಬುದ್ಧಿಯ ಪಾಷಾಣಹೃದಯವು ಕರಗಿ ನೀರಾಗುವದು. 'ವೈಷ್ಣವ ದ್ರೋಹದಿಂದ ತನಗೆ ಹೀಗಾಯಿತಲ್ಲವೇ! ಮಗನೆ ನೀನು ಹರಿ-ಹರ ಭಕ್ತ. ನಿನಗೇಕೆ ಈ ಮರಣ ಬಂತು. ನಾನೇ ನಿನಗೆ ವೈರಿಯಾದೆ" ಎಂದು ಹಲಬುತ್ತಾನೆ. ಗುಡಿಯ ಕಂಬಗಳಿಗೆ ತಲೆ ಹೊಡೆದುಕೊಂಡು ಜೀವ ಬಿಡುತ್ತಾನೆ.

ಬೆಳಗುಜಾವ ಹೂಪತ್ರಿ ತರುವ ತಾಪಸನು ಅದನ್ನು ನೋಡಿ ವಿಸ್ಮಿತನಾಗುತ್ತಾನೆ. ಊರೆಲ್ಲ ಎಲ್ಲ ಸುದ್ದಿಯೂ ಹಬ್ಬುತ್ತದೆ. ತಾಪಸ ಈ ಸುದ್ದಿಯನ್ನು ಅರಮನೆಗೂ ಮುಟ್ಟಿಸುತ್ತಾನೆ. ಚಂದ್ರಹಾಸ ಎಲ್ಲ ಜನರೊಡನೆ ಚಂಡಿಕಾಲಯಕ್ಕೆ ಬಂದು ಇವರ ಅಸುಗಳನ್ನಾದರೂ ಪಡೆಯುವೆ, ಇಲ್ಲವೆ ವಿಷ್ಣುಸಾಯುಜ್ಯವನ್ನಾದರೂ ಹೊಂದುವೆ ಎಂಬ ಪಂಥದಿಂದ ತನ್ನ ದೇಹದ ಮಾಂಸದಿಂದ ಆಹುತಿ ಕೊಟ್ಟು, ಪೂರ್ಣಾಹುತಿಗೆ ಶಿರವನ್ನೇ ಕೊಡುವೆನೆಂದು ಆತ್ಮಯಜ್ಞವನ್ನೆ ಪ್ರಾರಂಭಿಸುವನು. ಅವನ ಹರಿಭಕ್ತಿಗೆ ಮೆಚ್ಚಿ ಚಂಡಿಕಾದೇವಿ ಎರಡು ವರಗಳನ್ನು ಕೊಡುತ್ತಾಳೆ; ಆತ್ಮವಧೆ ಬೇಡ ಎಂದು ಅವನ ಖಡ್ಗವನ್ನು ತಡೆಯುತ್ತಾಳೆ. ಒಂದು ವರದಿಂದ ಜನ್ಮಜನ್ಮದಲ್ಲಿ ತನಗೆ ಹರಿಭಕ್ತಿ ದೊರಕೊಳ್ಳಲೆಂದೂ, ಎರಡನೆಯ ವರದಿಂದ ದುಷ್ಟಬುದ್ಧಿ ಮದನ ಜೀವಂತರಾಗಲೆಂದೂ ಚಂದ್ರಹಾಸ ಬೇಡಿಕೊಳ್ಳುತ್ತಾನೆ. ಆಗ ವೈಷ್ಣವ ಶಕ್ತಿಯೊಂದು ಅವನ ತಲೆಯ ಮೇಲೆ ಕೈಯಿಟ್ಟು ಕಿವಿಯಲ್ಲಿ ಮಂತ್ರೋಪದೇಶ ಮಾಡುವದು. ಚಂದ್ರಹಾಸ ಆ ಸಕಲ ಶಕ್ತಿರೂಪಿಣಿಯನ್ನು ಕೊಂಡಾಡುವನು. ಮಂತ್ರಿ, ಅವನ ಮಗ ಏಳುವರು. "ಆಹಾ! ಸತ್ತವರನ್ನು ಬದುಕಿಸಿದವರುಂಟೇ!" ಎಂದು ಜನರು ಚಂದ್ರಹಾಸನನ್ನು ಹೊಗಳುವರು. "ಕಾವರಾರು, ಕೊಲ್ಲುವರಾರು, ಇದೆಲ್ಲ ವಿಷ್ಣು ಮಾಯೆ. ಎಲ್ಲರೂ ಕೃಷ್ಣ ಭಜನೆ ಮಾಡಿರಿ" ಎಂದು ಜನರಿಗೆ ಬೋಧಿಸುವನು ಚಂದ್ರಹಾಸ. ಮುಂದೆ ಚಂದ್ರಹಾಸನಿಗೆ ಇಬ್ಬರು ಮಕ್ಕಳಾಗುವರು. ಪಾಂಡವರ ಕುದುರೆ ಕುಂತಳನಗರಕ್ಕೆ ಬರುವ ಹೊತ್ತಿಗೆ ಚಂದ್ರಹಾಸ ಮುನ್ನೂರ ವರ್ಷದ(?) ಮುದುಕನಾಗಿದ್ದ. (ರಾಮಚಂದ್ರನು ೯೦೦೦ ವರ್ಷ ರಾಜ್ಯವಾಳಿದನೆಂದೂ, ಚಂದ್ರಹಾಸ ಮುನ್ನೂರು ವರ್ಷ ಬಾಳಿದನೆಂದೂ ಸ್ಥೂಲಾಸತ್ಯೋಕ್ತಿಯನ್ನು ಬಿಟ್ಟಿದ್ದರೆ ಜೈಮಿನಿಗೂ ಅದರಂತೆ ಲಕ್ಷ್ಮೀಶನಿಗೂ ಏನು ಹಾನಿಯಾಗುತ್ತಿತ್ತೋ ದೇವರೇ ಬಲ್ಲ!) (ಸಂಧಿ ೩೨).

ಪಾಂಡವರ ಕುದುರೆಯನ್ನು ಚಂದ್ರಹಾಸನ ಮಕ್ಕಳು ಕಟ್ಟಿಹಾಕಿ 'ಯುದ್ಧ ಮಾಡುವದಷ್ಟೆ!' ಎಂದು ಅವನನ್ನು ಕೇಳಿದಾಗ, ಚಂದ್ರಹಾಸ 'ಬಾಲ್ಯದಿಂದ ತಾನು

ಭಜಿಸಿದ ದೇವರು ಪಾರ್ಥನ ಸಹಾಯಕ್ಕೆ ಬಂದು ನನಗೆ ಕಾಣಿಸುತ್ತಿದ್ದಾನೆ. ಕೃಷ್ಣ ದರ್ಶನದ ಪುಣ್ಯವೆ ಸಾಕು. ಉಳಿದ ಪುಣ್ಯದ ಗಸಣಿ ಬೇಡ' ಎಂದು ತಿಳಿಹೇಳುವನು. 'ಹತ್ತುವರೆ ತಿಂಗಳಾಗಿದೆ. ಇನ್ನು ಒಂದುವರೆ ತಿಂಗಳುಳಿದಿದೆ. ಧರ್ಮರಾಜನ ಯಜ್ಞಕ್ಕೆ ತಡೆ ಬೇಡ. ನೀವೇ ಅಶ್ವರಕ್ಷಣೆ ಮಾಡಿ' ಎಂದು ಅವರಿಗೆ ಹೇಳಿ, ಮಕ್ಕಳು ಸೈನ್ಯ, ಕುದುರೆ ಎಲ್ಲರೊಡನೆ ಚಂದ್ರಹಾಸನು ಕೃಷ್ಣದರ್ಶನಕ್ಕೆ ಬರುವನು. ಮಾಧವ ಧ್ಯಾನ ದಲ್ಲಿ ಮಾಡಿಮುಳುಗುವ ಚೇತನದ ಚಂದ್ರಹಾಸನನ್ನು ನೋಡಿ ಪಾರ್ಥನಿಗೆ ಧನ್ಯತೆ ಯೆನಿಸಿತಾದರೂ ಅವನನ್ನು ಗೆಲ್ಲುವ ಬಗೆಯೆಂತು ಎಂಬ ಚಿಂತೆ ತಪ್ಪಲಿಲ್ಲ. ಆಗ ಕೃಷ್ಣನು ತಾನು ಚಂದ್ರಹಾಸನಿಗೊಲಿದೆನೆಂದು ಹೇಳಿ, ಚಂದ್ರಹಾಸನಿಗೆ ತನ್ನ ರಮ್ಯ ರೂಪವನ್ನು ತೋರಿಸುತ್ತಾನೆ. ಚಂದ್ರಹಾಸ ಕೃಷ್ಣನಿಗೆ ನಮಸ್ಕರಿಸುತ್ತಾನೆ. ಕೃಷ್ಣನು ಅವನನ್ನು ಅಪ್ಪುತ್ತಾನೆ. ಅರ್ಜುನನೋ ಸುಮ್ಮನೆ ಇರುತ್ತಾನೆ. ಚಂದ್ರಹಾಸನನ್ನು ಆಲಿಂಗಿಸು ಎಂದು ಹೇಳಿದರೂ ಹಿಂದಿನ ಗೀತಾಶಾಸ್ತ್ರೋದ್ಧಾರಮಾಡಿ ಕೃಷ್ಣನಿಗೇ ತಿರುಗಿ ಪ್ರಶ್ನೆಮಾಡುತ್ತಾನೆ. ಆಗ ಕೃಷ್ಣ "ತನ್ನ ಶರಣರ ಜೀವನವೆ ತನಗೆ ಜೀವನ. ತಾನು ತನ್ನ ಶರಣರು ಬೇರೆಯಲ್ಲ. ಅವರ ಹೃದಯದಲ್ಲಿ ತಾನು ಪ್ರತ್ಯಕ್ಷನಾಗಿರುವೆ. ನಿನ್ನಂತೆಯೇ ಇವನಾದರೂ ನನಗೆ ಬೇಕಾದವನೆ. ಮರುಳೆ!' ಎಂದು ಹೇಳಿದಾಗ ಅರ್ಜುನ ಚಂದ್ರಹಾಸನನ್ನು ಆಲಿಂಗಿಸುವನು. ಅರ್ಜುನ ಕುದುರೆಯನ್ನು ಪಡೆಯು ವನು. ಉತ್ಸವವಾಗುವದು. ದುಷ್ಟಬುದ್ಧಿ, ಮದನನೂ ಕೃಷ್ಣನಿಗೆ ನಮಸ್ಕರಿಸುವರು. ಇವರಿಗೂ ಮುನ್ನೂರು, ಮುನ್ನೂರು ವರ್ಷ ಎಂದು ಕಾಣುತ್ತದೆ! ಗೋಕುಲದಲ್ಲಿ ಎಲ್ಲರಿಗೂ ನಾಲ್ಕು ಕೈ ಇದ್ದಂತೆ!

ಮುಂದೆ ಕುದುರೆಗಳು ಉತ್ತರ ಸಮುದ್ರವನ್ನು ಸೇರುವವು. ಹಂಸಧ್ವಜ ಮೊದಲಾದ ಸರ್ವತ್ರಗಮನದ ವೀರರೂ ಅಂಬುಧಿಯನ್ನು ಹೊಗುವರು. ಆ ಸಾಗರ ಮಧ್ಯದ ದ್ವೀಪದಲ್ಲಿ ಬಕದಾಲ್ಭ್ಯನಿದ್ದನು. ಅಧ್ರುವದ ಶರೀರಕ್ಕೆ ಹೆಚ್ಚು ಚಿಂತೆಯೇಕೆ ಎಂದು ಅವನು ಕೊಳೆತೊಣಗಿ ಛಿದ್ರವಾದ ಆಲದೆಲೆಯೊಂದನ್ನು ತಲೆಯಮೇಲೆ ನೆವಕ್ಕೆ ಹಿಡಿದುಕೊಂಡು ಕುಳಿತಿದ್ದನು. ಅಲ್ಲಿಗೆ ಕೃಷ್ಣನೊಡಗೂಡಿ ಪಾರ್ಥ ಮೊದ ಲಾದ ಐದು ರಾಜರು ಬರಲು "ಪುರುಷೋತ್ತಮನು ಕ್ಷಣಿಕರಾದ ಐವರನ್ನು ಕರೆದು ಕೊಂಡು ಬಂದನು. ಇನ್ನು ತನಗೆ ಸುಖವಾಗದು" ಎಂದುದಕ್ಕೆ ಪಾರ್ಥನು ಇದೇನು ಎಂದು ಆಶ್ಚರ್ಯಗೊಳ್ಳುವನು. ಬಕದಾಲ್ಭ್ಯನೊ ಜಿನಮುನಿಗೊಮ್ಮಟನಂತೆ, ವಲ್ಮೀ ಕಸ್ಥ ಮರೀಚಿ ಋಷಿಯಂತೆ ಇದ್ದನು. ಇವನಿದಿರು ಮಾರ್ಕಂಡೇಯ ರೋಮಶರು ಎಷ್ಟು ಜನರಳಿದರೊ ಇವನಿಗೇ ಗೊತ್ತಿಲ್ಲವಂತೆ; ಸತ್ಯಲೋಕವನ್ನಾಳಿದ ಇಪ್ಪತ್ತು ಬ್ರಹ್ಮರು ಮಾತ್ರ ತೀರಿದಂತೆ, ಕಲ್ಪಾಂತ ಕಾಲದ ಜಲಪ್ರಳಯದಲ್ಲಿ ಅನೇಕ ಶಾಖೆಯ

ಚಿಗುರಿದ ವಟವೃಕ್ಷವೊಂದು ಮೆರೆಯುವದಂತೆ. ಅದರ ಒಂದೆಲೆಯ ಮೇಲೆ ತನ್ನ ಮೃದುಪಾದಾಂಗುಷ್ಠವನ್ನು ಚೀಪುತ್ತ ಬಾಲಲೀಲೆಯಿಂದ ನಗುವ ಬಾಲಕನೊಬ್ಬನು ತೋರುವನಂತೆ. ಇಂಥ ಬಾಲಕನು ತನಗೆ ಅನೇಕ ಸಲ ಕಂಡರೂ ತನ್ನನ್ನು ಮಾತಾಡಿಸಿರಲಿಲ್ಲ. ಅದೇ ಅವನು ಈ ಪಂಚಭೂಪತಿಗಳನ್ನು ಕೂಡಿಕೊಂಡು ಕೃಷ್ಣರೂಪನಾಗಿ ಬಂದಿರುವನು. ಇನ್ನು ತನಗೆ ಅವನೆ ಆಶ್ರಯನು– ಎಂದು ಬಕದಾಲ್ಭ್ಯ ಹೇಳುವನು. ಕೃಷ್ಣನ ರಮಾರಮಣ ಸುಕುಮಾರ ಮೂರ್ತಿಯನ್ನು ಕಾಣುವ ಆಸೆ ತನಗೆ ಇದೆಯೆಂದು ಕೃಷ್ಣನಿಗೆ ಹೇಳಿಕೊಳ್ಳುವನು. "ಸದಾವಾಸಕೆ ಈ ಹರಿಯ ದೇಹವೆ ಗೇಹ; ಅನುಕೂಲಳಾದ ಸತಿ ಎಂದರೆ ಮುಕ್ತಿ–ತನಗೆ" ಎಂದು ತಾನು ಹೀಗಿರುವವನು ಎನ್ನುತ್ತಾನೆ ಅರ್ಜುನನಿಗೆ ಬಕದಾಲ್ಭ್ಯ. "ಇಪ್ಪತ್ತು ಬ್ರಹ್ಮರನ್ನು ಕಂಡ ನೀವು ನಮಗೆ ಗುರುಗಳು, ಮಹಾಪುರುಷರು; ಪೂಜ್ಯರು" ಎಂದು ಅರ್ಜುನ ಹೇಳಿದರೆ "ಕೃಷ್ಣನಿದಿರು ತನಗೆ ಆ ಗರ್ವವಿಲ್ಲ" ಎಂದು ಹೇಳಿ ತಾನು ಒಮ್ಮೆ ಹೇಗೆ, ನಾಲ್ಕು, ಎಂಟು, ಹದಿನಾರು, ಮೂವತ್ತೆರಡು, ಅರವತ್ತುನಾಲ್ಕು ಹೀಗೆ ಇಮ್ಮಡಿ ಮುಖದ ಬ್ರಹ್ಮರನ್ನು ನೋಡುತ್ತ ಕೊನೆಗೆ ಸಾವಿರ ಮುಖದ ಪರಮೇಷ್ಠಿಯನ್ನು ಕಂಡು, ಅವನವಿನಯ ನೋಡಿ ತಾವೆಲ್ಲರೂ ಹೇಗೆ ನಿಗರ್ವಿತರಾದರು– ಎಂಬ ತನ್ನ ಅನುಭವದ ದೃಷ್ಟಾಂತವನ್ನು ಹೇಳಿ 'ಬುದ್ಧಿವಂತರು ಗರ್ವಮಾಡಬಾರದು. ಈ ಕೃಷ್ಣನು ಆ ಸಹಸ್ರಶೀರ್ಷ ಪುರುಷನೆ ಅಹುದು' ಎಂದು ಸಾರುವನು. ಕೃಷ್ಣನು ಆಮೇಲೆ ಬಕದಾಲ್ಭ್ಯನನ್ನು ಒಡಂಬಡಿಸಿ ಶಿಬಿಕೆಯಲ್ಲಿ ಕುಳ್ಳಿರಿಸಿ ಸಿಂಧು ದೇಶದತ್ತ ಕುದುರೆಯ ಬೆಂಬತ್ತಿ ಬರುವನು.

ಅಲ್ಲಿ ದುರ್ಯೋಧನನ ತಂಗಿ ದುಶ್ಶಲೆಯ ಮಗ ಬಾಲರಾಜನಾಗಿದ್ದನು. ದುಶ್ಶಲೆ ಕೃಷ್ಣನಿಗೆ ಶರಣಾಗತಳಾಗುವಳು. ಕೃಷ್ಣನೂ ಅವಳನ್ನು ಒಡಹುಟ್ಟಿದ ತಂಗಿಯಂತೆ ಸನ್ಮಾನಮಾಡಿ ಅಧ್ವರಕ್ಕೆ ಕರೆಯುವನು. ಆಕೆಯೂ ಎಲ್ಲರೊಡನೆ ಹಸ್ತಿನಾವತಿಗೆ ಬರುವಳು. (ಸಂ. ೩೨).

ವರ್ಷದ ಕೊನೆಗೆ ಕುದುರೆ ಧರ್ಮರಾಜನಿದ್ದಲ್ಲಿಗೆ ಬರುವದು. 'ನಮ್ಮ ಪಂಚಕದ ಜೀವನವು ನಿಮ್ಮದೆ ಆಗಿರುವಾಗ ಬಾಹ್ಯೋಪಚಾರವೇತಕೆ ?' ಎಂದು ಹೇಳಿ ಧರ್ಮರಾಜನು ಅಶ್ವದಿಗ್ವಿಜಯ ವೃತ್ತಾಂತವನ್ನು ಕೇಳುವನು. [ ಲಕ್ಷ್ಮೀಶನು ಇಲ್ಲಿ [೭–೨೫] ೧೯ ಪದ್ಯಗಳಲ್ಲಿ ( ದಿ. ನಂಜುಂಡ ಶಾಸ್ತ್ರಿಗಳ ಪ್ರತಿಯ ಪ್ರಕಾರ ) ಅತಿ ಸಂಕ್ಷೇಪವಾದರೂ ರಮ್ಯವಾಗಿ ಎಲ್ಲ ವೃತ್ತಾಂತವನ್ನು ಸಂಗ್ರಹಿಸಿರುವನು. ] ಕೃಷ್ಣನು ಅವನಿಗೆ ಅದನ್ನು ಹೇಳುವನು. ಅದಾದಬಳಿಕ ಯಜ್ಞ ಸಿದ್ಧತೆಯಾಗಿ ೬೪

ರಾಜದಂಪತಿಗಳು ಯಜ್ಞಕ್ಕಾಗಿ ನೀರು ತರಲು ಹೊರಡುವರು. ಕೃಷ್ಣನು ರುಕ್ಮಿಣಿಯೊಡನೆ ಹೊರಡುವನು. ಅವನ ಉಳಿದ ಸಪ್ತ ಮಹಿಷಿಯರು ಏನು ಮಾಡುವರೆಂದು ನಾರದನು, ಸತ್ಯಭಾಮೆ, ಜಾಂಬವತಿ ಮೊದಲಾದವರ ಮನೆಗೆ ಹೋಗಿ ನೋಡುವನು. 'ಕೃಷ್ಣನನ್ನು ಅಗಲಿ ನಾವು ನಿಮಿಷವೂ ಇರಲಾರೆವು. ನಮ್ಮ ಕೃಷ್ಣ ನಮ್ಮಲ್ಲಿದ್ದಾನೆ' ಎಂದು ಎಲ್ಲರೂ ತೋರಿಸುವರು. (ಸಂ ೩೩).

೬೪ ರಾಜ ದಂಪತಿಗಳು ತಂದ ನೀರಿನಲ್ಲಿ ಮಿಂದು ದ್ರೌಪದಿ ಧರ್ಮರಾಜರು ಯಜ್ಞವನ್ನು ಸಾಂಗವಾಗಿ ಮಾಡುವರು. ಸುಪರ್ಣಚಯದಬಳಿಗೆ ಬಂದು, ಕುದುರೆಯನ್ನು ತರಿಸಿ, 'ಅಗ್ನಿಃ ಪಶು ಭೂತ್' ಎಂಬ ಮಂತ್ರ ಹೇಳಿ "ಎಲೆ ಕುದುರೆಯೆ, ಅಶ್ವಲೋಕದಲ್ಲಿ ನೀನು ಅಮರ ಪದವಿಯನ್ನು ಪಡೆ ಹೋಗು. ನಿನಗೆ ಉತ್ತಮ ಸ್ವರ್ಗವಾಗಲಿ" ಎನ್ನಲು ಕುದುರೆ ತಲೆ ಕೊಡಹುವುದು. ಧರ್ಮರಾಜನು ಅದರ ಅರ್ಥವೇನೆಂದು ಪಶುಭಾಷಾಭಿಜ್ಞನಾದ ನಕುಲನಿಗೆ ಕೇಳಲು "ಮೇಲಿನ ಲೋಕದ ಅಶ್ವಪದವಿ ಬೇಡ, ಕೃಷ್ಣಸಾಯುಜ್ಯ ಬೇಕು. ಈಶ್ವರಾರ್ಪಣವಲ್ಲದ ಯಜ್ಞಗಳಲ್ಲಿ ಯಜ್ಞ ಕರ್ತೃವಿಗೂ, ಯಜ್ಞಾಶ್ವಕ್ಕೂ ಸ್ವರ್ಗವಿದೆ. ಇಲ್ಲಿ ಕೃಷ್ಣಸಾನ್ನಿಧ್ಯವೇ ಇರುವದರಿಂದ ಕೃಷ್ಣನಲ್ಲಿಯೇ ನಾನು ಸೇರುವೆನು ನೋಡಿರಿ" ಎನ್ನುತ್ತದೆ ಕುದುರೆ ಎಂದು ನಕುಲ ತಿಳಿಸುವನು. ಆಮೇಲೆ ಅದನ್ನು ಯೂಪಕ್ಕೆ ಕಟ್ಟಿ, ಧೌಮ್ಯರು ಅದರ ಕಿವಿಯನ್ನು ಕತ್ತರಿಸಿ ಅದರಿಂದ ಕ್ಷೀರಧಾರೆ ಹೊರಡುವದನ್ನು ತೋರಿಸುವರು; ಮತ್ತು ಭೀಮನಿಗೆ ಅದರ ತಲೆಯನ್ನು ಕತ್ತರಿಸಲು ಆಜ್ಞಾಪಿಸುವರು. ಅವನು ಹಾಗೆ ಮಾಡಲು, ಕುದುರೆಯ ತಲೆಯು ಆಕಾಶದಲ್ಲಿಯೇ ಹಾರಿ ಅಡಗುವದು. ಕೃಷ್ಣ ಆ ಕುದುರೆಯ ಎದೆಗೆ ಹೊಡೆಯಲು ಅದು ಕೆಳಗೆ ಬಿದ್ದು, ಅದರ ಜೀವಾತ್ಮದ ತೇಜವು ಕೃಷ್ಣನ ಮುಖದಲ್ಲಡಗುವದು. ಬಿದ್ದ ಕುದುರೆಯ ದೇಹವು ಕರ್ಪೂರವಾಗುವದು. ಅದನ್ನೆ ಶಕ್ರನಿಗೆ ಆಹುತಿ ಕೊಡುವರು. ಕೊನೆಗೆ ಹಯಮೇಧ ಫಲವನ್ನೂ ಧರ್ಮರಾಜನು ಕೃಷ್ಣನಿಗೇ ಅರ್ಪಿಸುವನು. ಹೀಗೆ ಯಜ್ಞವು ಸಮಾಪ್ತವಾಗುವದು.

**ಕಥಾವಸ್ತು ವಿಶೇಷ:**– ಈ ಪ್ರಕಾರದ ಜೈಮಿನಿ ಅಶ್ವಮೇಧನೆಂಬ ಭಕ್ತಿ ನವರಸಭರಿತವಾದ ಪೌರಾಣಿಕ ಕಾದಂಬರಿಯಲ್ಲಿ, ಯಾವ ಪುರಾಣೇತಿಹಾಸಗಳಲ್ಲೂ ಸಿಕ್ಕದ ರಾಜರೂ, ಯಾವ ಭೂಗೋಲಕ್ಕೂ ಸರಿ ಹೋಗದ ಪಟ್ಟಣಗಳೂ, ಭಾಗವತದ ಧ್ರುವ, ಪ್ರಲ್ಹಾದ, ರುಕ್ಮಾಂಗದರೂ, ಭಾರತದ ಭೀಷ್ಮ, ಅಭಿಮನ್ಯು, ಕರ್ಣರೂ ಉಳಿದ ಇತಿಹಾಸ ಪುರಾಣಗಳ ಶಿಬಿ, ಬಲಿ, ದಿಲೀಪ, ಹರಿಶ್ಚಂದ್ರರೂ–ಇವರೆಲ್ಲರನ್ನು ಮೀರುವ ತ್ಯಾಗದ, ಭಕ್ತಿಯ, ಶೌರ್ಯದ ಕಥೆಗಳೂ ತುಂಬಿವೆ. ತಮಿಳು ಶಿವಭಕ್ತರ

ರುದ್ರಭಯಾನಕ ಸಮರ್ಪಣೆ, ಆಳ್ವಾರರ ನಾಮರೂಪಾನುಸಂಧಾನ ಪ್ರವೃತ್ತಿ, ಜಿನ ಮುನಿಗಳ ತ್ಯಾಗ ವೈರಾಗ್ಯ, ಶರಣರ ನಿಶ್ಚಲ ಶ್ರದ್ಧೆ, ಇವೆಲ್ಲವೂ ಈ ಅಶ್ವಮೇಧದ ಉಪಾಖ್ಯಾನಗಳ ನಾಯಕರಲ್ಲಿ ಅತ್ಯುತ್ಕಟವಾಗಿ ಕಂಡುಬರುವವು.

ಇನ್ನೊಂದು ಮಾತೆಂದರೆ, ಇದರೊಳಗಿನ ಕೆಲಪಾತ್ರಗಳು ಸಂಕಲ್ಪ ಸೂರ್ಯೋದಯ, ಪ್ರಭೋದ ಚಂದ್ರೋದಯ ಈ ನಾಟಕಗಳಲ್ಲಿ ಮತ್ತು ಚಾಮರಸನ ಪ್ರಭು ಲಿಂಗಲೀಲೆಯಲ್ಲಿ ಬರುವ ಕೆಲವು ಪಾತ್ರಗಳಂತೆ ರೂಪಕಮುಖವಾಗಿ ಒಂದು ನೈತಿಕ ಜಗತ್ತನ್ನೆ ಹೊಳೆಯಿಸುವವು. ಜ್ವಾಲೆ, ನೀಲಧ್ವಜ, ಸ್ವಾಹಾ, ಅಗ್ನಿ, ಉನ್ಮುಖಿ; ಹಂಸಧ್ವಜ, ಸುರಥ, ಸುಧನ್ವ, ಧರ್ಮಪುರದ ಕೃಷ್ಣಶರ್ಮ, ಪುರೋಹಿತ ಸತ್ಯಶೀಲ; ದುಷ್ಟಬುದ್ಧಿ, ಮದನ, ವಿಷಯೆ, ಮೇಧಾವಿ, ಮೇಧಾವಿನಿ, ಶ್ರದ್ಧಾಯಷ್ಟಿಯ ವಿವೇಕ, ಹಿಂಸಾಯಷ್ಟಿಯ ಕ್ರೋಧ; ಚಂಡಿ; ಇವು ಮೂರ್ತಿವೆತ್ತ ದೋಷಗಳು ಗುಣಗಳು.

ಕಾವ್ಯದುದ್ದಕ್ಕೂ ಪೌರುಷದ ಹೆಸರಿನ ಚಲ (ಛಲ) ವು, ದೈವ, ವಿಧಿ, ಕರ್ಮ, ಪೂರ್ವಕೃತ, ಲಲಾಟಲಿಖಿತ, ಶಾಪ, ಅದೃಷ್ಟ, ಪ್ರಾರಬ್ಧಗಳೊಡನೆ ಹೋರಾಟ ಮಾಡಿ ಕೊನೆಗೆ ಪೌರುಷ–ದೈವಗಳೆರೆಡನ್ನೂ ಮಿಕ್ಕಿರುವ ಪುರುಷೋತ್ತಮನ ಪಾದದಲ್ಲಿ ಸಮಾಧಾನ ಪಡೆಯುವದಾಗಿ ಕಂಡುಬರುವದು. ಛಲಗಾರರ ಒಂದು ದೊಡ್ಡ ಮಾಲೆಯೆ ಈ ಕಥಾನಕಗಳಲ್ಲಿದೆ. ಇಂದ್ರನ ದೈವಿಕಛಲ, ಯೌವನಾಶ್ವನ ತಾಯಿಯ ಸಂಸಾರಿಕ ಛಲ, ಜ್ವಾಲೆಯ ಸ್ತ್ರೀ ಛಲ, ಶಂಖಲಿಖಿತರ ಶಾಸ್ತ್ರೀಯ ಛಲ, ಚಿತ್ರಾಂಗದೆಯ ತಾಯ್ತನದ ಛಲ, ಸರ್ಪಗಳ ಸ್ವಾರ್ಥದ ಛಲ, ಭೀಷಣನ ಮಾಯಾ ಛಲ, ಶ್ರೀರಾಮನ ಕೀರ್ತಿಯ ಛಲ, ದುಷ್ಟಬುದ್ಧಿಯ ಸ್ವಾಭಾವಿಕ ಛಲಗಳು ಶೆಕ್ಸಪಿಯರನ ನಾಟಕಗಳೊಳಗಿನ ದುರಂತ ನಾಯಕರ ಪ್ರತಿನಾಯಕರ ಶೀಲಗಳಂತೆ ಅಭ್ಯಾಸಾರ್ಹವಾಗಿವೆ.

ಒಂದೊಂದು ಕಥೆಯನ್ನೂ ಉಳಿದೆಲ್ಲ ಕಥೆಗಳೊಡನೆ, ಪಾತ್ರಗಳನ್ನು ಪಾತ್ರಗಳೊಡನೆ, ವಸ್ತುಸಂದರ್ಭಗಳನ್ನು ಸಂದರ್ಭಗಳೊಡನೆ ಹೋಲಿಸಿ ಬಿಡಿಸಿ ನೋಡಿದರೆ ಈ ಅಶ್ವಮೇಧೀಯ ಕಥಾವಳಿಯ ರೂಪಕ ಸಾಮರ್ಥ್ಯವು ಎದ್ದು ತೋರುವದು. ಇದಲ್ಲದೆ ಒಂದೊಂದು ಕಥೆಗೂ ಅದರ ವಿಶಿಷ್ಟವಾದ ಜೀವವೊಂದು ಇದ್ದೇ ಇದೆ. ಜ್ವಾಲೆಯದು ವಿಷಮದಾಂಪತ್ಯದ, ನಾರಿಯ ಛಲದ ಕತೆ; ಸುರಥಸುಧನ್ವರದು ವ್ರತನಿಷ್ಠೆಯ ತಾರತಮ್ಯದ ಕತೆ; ಬಭ್ರುವಾಹನನದು ದೈವ ದುರ್ವಿಲಾಸದ ಕತೆ, ರಾಮ

ನಮು ಕಟಕಿಯಿಂದ ತುಂಬಿದ ಕೀರ್ತಿ ಅಪಕೀರ್ತಿಗಳ ಕತೆ; ಈ ಎರಡು ಕತೆಗಳನ್ನು ಅನೇಕ ವಿಧದಿಂದ ಸಾಮ್ಯ ವೈಷಮ್ಯ ನೋಡಿ ಅಭ್ಯಾಸ ಮಾಡಿದರೆ ರಸಾಸ್ವಾದವು ಹೆಚ್ಚಾಗುವಂತಿದೆ) ಮಯೂರಧ್ವಜನದು ಅತಿ ರೌದ್ರ ಸತ್ವಪರೀಕ್ಷೆಯ ಕತೆ, ಚಂದ್ರಹಾಸನದು ದೈವದ ದತ್ತಪುತ್ರನ ಕತೆ.

**ರಸವೈಚಿತ್ರ್ಯ:—** ಈ ವಸ್ತು ವೈಚಿತ್ರ್ಯದೊಂದಿಗೆ, ತರುಣ ತರುಣಿಯರ ಪಾಮರರ, ಜಾರೆಯರ ಶೃಂಗಾರ, ವೃದ್ಧರ ವಿವೇಕಸಾರ, ಕಾವ್ಯದ ಮೈತುಂಬಹರಿದ ವೀರ, ರಣಾಂಗಣದ ರೌದ್ರ, ಕರುಣ, ಭಯಾನಕ ಬೀಭತ್ಸ; ಅನೇಕ ಸಂದರ್ಭಗಳಲ್ಲಿ ವಿವಿಧವಾಗಿ ಬರುವ ಹಾಸ್ಯ, 'ಏನೆಂಬೆನದ್ಭುತವನು' ಎಂದು ಮಾತು ಮಾತಿಗೆ ಉದ್ಗಾರ ಹೊರಡಿಸಬಹುದಾದ ಅದ್ಭುತ, ಅಂತಃಪ್ರವಾಹವಾಗಿ ಹರಿಯುವ ಶಾಂತ ಇಲ್ಲವೆ ಈ ಕಾವ್ಯವನ್ನು ನವರಸ ಪ್ರೌಢವನ್ನಾಗಿ ಮಾಡಿವೆ. ಇಷ್ಟೆ ಅಲ್ಲ, ಅವು ಈ ಎಲ್ಲ ಪ್ರಾಕೃತಿಕರ ಸ-ಭಾವಗಳನ್ನು ಸಂಚಾರಿಗಳನ್ನಾಗಿ ಮಾಡಿ ಅವುಗಳ ಸಂಘರ್ಷದಲ್ಲಿ ಭಕ್ತಿಯ 'ನವ'ರಸವನ್ನೆ ಉಕ್ಕಿಸುವವು ಹೊಮ್ಮಿಸುವವು. ಕುಮಾರವ್ಯಾಸನು ಈ ಭಕ್ತಿಕಲೆಯ ಅವತಾರವನ್ನು ತನ್ನ ಭಾರತದಲ್ಲಿ ಮಾಡಿಸಿದರೆ, ಲಕ್ಷ್ಮೀಶನು ಅದರ ಲೀಲಾನೃತ್ಯವನ್ನೆ ತನ್ನ ಕಾವ್ಯದಲ್ಲಿ ಮಾಡಿಸಿದ್ದಾನೆ. ಮಹತ್ವದ ಎಲ್ಲ ಪಾತ್ರಗಳಲ್ಲೂ 'ಮುಕುಂದಾಭಿರತಿ' ಯು ಸ್ಥಾಯಿಯಾಗಿ ಕಂಡುಬರುವದು. ಲಕ್ಷ್ಮೀಶನ ಸ್ಥಾಯಿಯೂ ಅದೆ; ಕಾವ್ಯದ ಸ್ಥಾಯಿಯೂ ಅದೆ. ಅದರಿದಿರು ಹಾಸವು ಪರಿಹಾಸವಾಗಿ ತೋರುವದು; ವೀರವು ಕ್ಷಾತ್ರತಾನುಷವಾಗಿ ತೋರುವದು; ಶೃಂಗಾರವು ಕರುಣರಂಜಿತವಾಗಿ ತೋರುವದು, ಅದ್ಭುತವು ಸ್ವಭಾವವಾಗಿ ತೋರುವದು, ಶಾಂತವು ಸಪ್ಪೆಯಾಗಿ ತೋರುವದು. ಹೀಗಿದ್ದರೂ ಈ ರಸಭಾವಗಳು ತಂತಮ್ಮ ಸ್ಥಳಗಳಲ್ಲಿ ತನ್ಮಯತೆಯನ್ನೀಯಲು ಸಮರ್ಥವಾಗಿವೆ. ವೀರರ ಮೊದಲಿಕೆಯಿರಲಿ, ಭಕ್ತರ ಸಲಿಗೆಯ ಸಲ್ಲಾಪವಿರಲಿ, ವಿರೋಧಿಗಳ ವಿಪರೀತ ಭಕ್ತಿಯುದ್ಗಾರವಿರಲಿ, ಸರಸಿಗಳ ಸರಸವಿರಲಿ, ಪಾಮರಿಯರ ಜಾರೆಯರ ವ್ಯಂಗ್ಯ ಕೌತುಕವಿರಲಿ, ಉಕ್ತಿಗಳ ಚಮತ್ಕೃತಿಯಿರಲಿ ಹಾಸ್ಯವು ಉತ್ತೇಜಕವಾಗಿಯೆ ಬಂದಿದೆ ಲಕ್ಷ್ಮೀಶನ ರೀತಿಯಲ್ಲಿ. ಪ್ರಪಾಶಾಲೆಯಿರಲಿ, ವೇಶ್ಯಾವಾಟವಿರಲಿ, ರಾಜರ ಅಂತಃಪುರವಿರಲಿ, ತರುಣಿಯರ ಕ್ರೀಡಾವನವಿರಲಿ, ಪ್ರೌಢೆಯರ ಕಟಕಿಯಿರಲಿ ರಸಿಕ ಲಕ್ಷ್ಮೀಶನ ಉಪಮಾನ ಪ್ರಪಂಚವೇ ಇರಲಿ, ಶೃಂಗಾರವು ಇಣಿಕಿದಲ್ಲಲ್ಲಿ "ಇದು ಶೃಂಗಾರ ಕುಸುಮತರು ತುರುಗಿದಾರಣ್ಯ"ವೆಂಬ ಆನಂದಪ್ರದವಾಗುವದು. ಕಾವ್ಯದಭಿತ್ತಿಯೆ ವೀರರಸರಚಿತವಾಗಿರುವಾಗ ಬೇರೆ ಹೇಳಬೇಕೆ? ಕರುಣವೂ ಕಾವ್ಯದಲ್ಲಿ ವಿವಿಧವಾಗಿ ಬಂದಿದೆ.

ವಿಪ್ರಲಂಭದ ಮಧುರ ಕಾರುಣ್ಯ. ಮರಣದ ದಾರುಣ ಕಾರುಣ್ಯ, ದೈವದ ವಿಶಾಲ ಕಾರುಣ್ಯ, ಕವಿ ಲಕ್ಷ್ಮೀಶನ ಸ್ವಾಭಾವಿಕ ಕಾರುಣ್ಯ, ಇವು ಕರುಣದಲ್ಲಿಯೇ ವಿಚಿತ್ರ ಕಿರಣಗಳನ್ನು ಹುಟ್ಟಿಸುವವು.

**ಕಾವ್ಯನಾಯಕ:—** ಇಂಥ ಈ ಕಾವ್ಯದ ನಾಯಕನಾರು? ನಾಯಕ ರಸವಾವುದು? ಎಂದು ಪ್ರಶ್ನೆಯುಂಟಾಗುವದು ಸ್ವಾಭಾವಿಕವಾಗಿದೆ. ಕೆಲವರು ಧರ್ಮನೇ ಕಾವ್ಯದ ನಾಯಕನೆಂದೂ, ಶಾಂತವೇ ಪ್ರಧಾನ ರಸವೆಂದೂ ಹೇಳುತ್ತಾರೆ, ಯಜ್ಞದೀಕ್ಷಿತನೆಂಬ ಆಧಿಕಾರದಿಂದ ಅವನಿಗೆ ಈ ನಾಯಕ ಪಟ್ಟ ಹೋಗಬೇಕಲ್ಲದೆ ಈ ಕಾವ್ಯರಂಗದಲ್ಲಿ ಧರ್ಮನು ಮಾಡಿದ ಅಂಥ ಕಾರ್ಯವೇನು? ಯಜ್ಞದೀಕ್ಷಿತನಿಗಿಂತ ಯಜ್ಞಾಶ್ವವೇ ಹೆಚ್ಚು ಕಾರ್ಯ ಮಾಡಿದೆ. ಅದ್ಭುತವು ಕಾವ್ಯದ ಪ್ರಧಾನ ರಸವೆಂದರೆ ಕುದುರೆಯೆ ಅದಕ್ಕೆ ನಾಯಕನಾಗಬಹುದೇನೋ! ಯುದ್ಧಕ್ಕೆ ಮೀಸಲಾದ ಈ ಕಾವ್ಯದಲ್ಲಿ ಮೊದಲಿನಿಂದ ಕೊನೆವರೆಗೂ ಸತ್ತುಕೆಟ್ಟು ಯುದ್ಧಮಾಡಿದ ವೀರರಲ್ಲಿ ಅನೇಕ ಸಂಗ್ರಾಮ ಶೂರನೆಂದರೆ ಅರ್ಜುನ. ಆದರೆ ನಿಜವಾಗಿ ಹೇಳುವದಾದರೆ ಜಯವು ಅರ್ಜುನನಿಗಿದ್ದರೂ, ಬಹುತರವಾದ ಕಥೆಗಳಲ್ಲಿ ಅವನ ಪ್ರತಿಪಕ್ಷಿಗಳೆ ಕೆಚ್ಚಿನ ವೀರರು ಎಂಧು ಹೇಳಬೇಕಾಗುವದು. ಅನೇಕೋಪಾಖ್ಯಾನಗಳ ಗೊಂಚಲಾದ ಈ ಕಾವ್ಯಕ್ಕೆ ಅನೇಕ ನಾಯಕರಿರುವದೂ ಸಹಜವೇ ಆಗಿದೆ. ಆ ಆ ಉಪಾಖ್ಯಾನದ ಮಟ್ಟಿಗೆ ಅವರೇ ಅರ್ಜುನನಿಗಿಂತ ಹೆಚ್ಚಿನವರು. ಆದರೆ ಇಡೀ ಕಾವ್ಯಕ್ಕೆ ಇವರಾರೂ ನಾಯಕರಾಗಲಾರರು. ಇಡೀ ಕಾವ್ಯವು 'ಕಷ್ಣಚರಿತಾಮೃತ'ವೆಂದೂ ಅದಕ್ಕೆ ಕೃಷ್ಣನೆ ನಾಯಕನೆಂದು ಲಕ್ಷ್ಮೀಶನು ಹೇಳಿದಂತೆ (ಸಂ. ೩, ೪, ೪೦. ೪೬) ಅದು ನಿಜವಾಗಿದೆ. ಎಲ್ಲ ನದಿಗಳು ಸಮುದ್ರವನ್ನು ಕೂಡುವಂತೆ ಇಲ್ಲಿಯ ಎಲ್ಲ ನಾಯಕರಿಗೆ ಕೃಷ್ಣನಲ್ಲಿಯೇ ಕೊನೆಯ ಗತಿಯಾಗುವದು. ಅಥವಾ ಇಲ್ಲಿಯ ಉಪಾಖ್ಯಾನಗಳಲ್ಲಿ ನಾಯಕರಿಲ್ಲ; ಪ್ರತಿದ್ವಂದ್ವಿಗಳಿದ್ದಾರೆ. ಒಬ್ಬ ಪೌರುಷದ ಪ್ರತೀಕ, ಇನ್ನೊಬ್ಬ ದೈವದ ಪ್ರತಿನಿಧಿ. ಇವರಿಬ್ಬರ ದ್ವಂದ್ವವನ್ನು ಮೀರಿ ದ್ವಂದ್ವಾತೀತನಾದ ಶ್ರೀಕೃಷ್ಣನೆ ಇಬ್ಬರಿಗೂ ಸೂತ್ರಧಾರನಾಗುವನು. ದ್ವಂದ್ವನಾಯಕರು ಆ ಪರದೈವತದ ಇಮ್ಮುಖಗಳಾಗುವರು. ಒಂದು ಕಡೆಗೆ 'ಪಾಂಡವಪ್ರತಿಷ್ಠಾಪನಾಚಾರ್ಯ'ನಾಗಿ, ಇನ್ನೊಂದು ಕಡೆಗೆ ಅನೇಕ ಶರಣರ ಏಕಶರಣ್ಯನಾಗಿ, ಮತ್ತೊಂದು ರೀತಿಯಲ್ಲಿ ವಿವಿಧ ಮಾನವ ಚಾರಿತ್ರ್ಯ ಮಧ್ಯದಲ್ಲಿ, ಲೀಲಾಮಾನವನೂ, ಲೀಲಾನಾಟಕ ಸೂತ್ರಧಾರನೂ ಆಗಿ ಎತ್ತ ನೋಡಿದರೂ ಶ್ರೀಕೃಷ್ಣನೆ ಲಕ್ಷ್ಮೀಶನ ಭಾರತದ ವಸ್ತು ಪ್ರಪಂಚಕ್ಕೂ,ರಸ—ಭಾವ ಪ್ರಪಂಚಕ್ಕೂ ಮಧ್ಯಬಿಂದುವಾಗಿಯೂ, ಮಹತ್ತಿನ ಪರಿಘನಾಗಿಯೂ ವಿರಾಜಿ

ಸುವನು. ಈ ಎಲ್ಲ ಕಾವ್ಯದ ವಾಸ್ತುವೈಭವದಲ್ಲಿ ಕಥಾದ್ರವ್ಯದ ಮುಕ್ಕಾಲು ಬಂಡಿವಾಳ ಮೂಲ ಜೈಮಿನಿಯದು; ಕಲಾಸೌಂದರ್ಯದ ಮುಕ್ಕಾಲುಪಾಲು ಗಳಿಕೆಬಳಿಕೆ ಲಕ್ಷ್ಮೀಶನದು. ಜೈಮಿನಿ ಕತೆಗಾರ, ವೈಷ್ಣವಾಭಿಮಾನಿ; ಲಕ್ಷ್ಮೀಶ ಕವಿ, ರಸಭಕ್ತ.

**ಲಕ್ಷ್ಮೀಶನ ಕಲೆ:—** ಅಂತೆಯೆ ಲಕ್ಷ್ಮೀಶನ ಕಲೆಗಾರಿಕೆಯ ರಮ್ಯತೆ ಎಲ್ಲ ಅವನ ವರ್ಣನಾಚಾತುರಿಯಲ್ಲಿ ಅಡಕವಾಗುವದು. ಅವನ ಪದಗಳ ಚಾತುರ್ಯ, ಮಾಧುರ್ಯ; ಅವನ ಅರ್ಥದ ವೈಶಾಲ್ಯ, ಗಾಂಭೀರ್ಯ; ಅವನ ಪದಾರ್ಥಗಳ ಬಂಧ, ಪಾಕ, ಅವನ ಛಂದದ ಭಂಗಿ, ವೈಚಿತ್ರ್ಯ; ಸ್ವರಸಂಯೋಜನೆಯ ಗತಿ, ಗಮಕ; ವ್ಯಂಜನ ರಚನೆಯ ಅನುಪ್ರಾಸ, ಯಮ; ಅವನ ನಾದಮಾಧುರ್ಯದಲ್ಲಿ ಲೀಲಾಜಾಲವಾಗಿ ಆವಿರ್ಭವಿಸುವ ಧ್ವನಿತಾರ್ಥ ಪ್ರಪಂಚ; ಅವನ ಅಲಂಕಾರಗಳ ಬೆಡಗಿನಲ್ಲಿ ಮಿಂಚುವ ಬಿನ್ನಾಣದ ಪರಿಪರಿ; ಅವನ ವರ್ಣನಾತಂತ್ರದ ಸೂಚಕತೆ; ಅವನ ಕಲೆಯ ಚಮತ್ಕೃತಿ–ಇವುಗಳಲ್ಲಿ ಒಂದೊಂದೂ ಹೌದು ಇದು 'ಶಾರದೆಯ ಸನ್ಮೋಹನಾಂಗ ಲಾವಣ್ಯ' 'ಭಾವಕರ ಕಿವಿದೊಡವಿಗೊದವಿದ ಹಿರಣ್ಯ' ಎನ್ನಿಸುವದು. ಲಕ್ಷ್ಮೀಶನೆ ತನ್ನ ಕಾವ್ಯ ವಿಮರ್ಶೆಯನ್ನು (೧, ೫, ೬, ೮, ೧೨; ೪, ೮; ೫, ೫೧; ೩, ೬; ೨೫, ೭; ೩೪, ೪೪, ೪೬) ತನ್ನ ಕಾವ್ಯದಲ್ಲಿ ಅಲ್ಲಲ್ಲಿ ಮಾಡಿಕೊಂಡಿದ್ದಾನೆ. ಅದು ಉಚಿತವಾಗಿದೆ. ಶ್ಲೇಷ, ಉಪಮೆ, ಉತ್ಪ್ರೇಕ್ಷೆ, ರೂಪಕ, ದೃಷ್ಟಾಂತ, ಕಾವ್ಯಲಿಂಗ ಇವೇ ಮೊದಲಾದ ಅಲಂಕಾರಗಳಿಗೆ ಕೊರತೆ ಇಲ್ಲ. ಆದರಲ್ಲಿಯೂ ಲಕ್ಷ್ಮೀಶನ ಉತ್ಪ್ರೇಕ್ಷೆಗಳ ಸೊಗಸೇ ಬೇರೆ. ಅವನ ವ್ಯಂಗ್ಯಾರ್ಥ ಸರಣಿಯನ್ನು ಅನುಲಕ್ಷಿಸಿದಂತೆ ಅವನ ಕಾವ್ಯದ ರುಚಿ ಇನ್ನಷ್ಟು ಹೆಚ್ಚಾಗುತ್ತ ಹೋಗುವದು. ಕೆಲಕೆಲವು ಪದ್ಯಗಳಿಗೆ ಅನೇಕಾರ್ಥಗಳಿವೆ. ಆದರೂ ಬರೆವಣಿಗೆ ಪಾಷಾಣ ಪಾಕವಲ್ಲ.

———

# ೪ ಅನುಬಂಧ.

## ೧. ಚಂದ್ರಹಾಸನ ಕಥೆ. *

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸಂಧಿ ೨೮–೩೧ ಪೂರ್ಣ, ಹಾಗು ೩೨ನೆಯ ಸಂಧಿಯಲ್ಲಿ ೨೨ನೆಯ ಪದ್ಯದ ವರೆಗೆ ಚಂದ್ರಹಾಸಾಖ್ಯಾನವಿದೆ. ಅದರ ಮುಂದಿನ ಸಂಧಿಯಲ್ಲಿ ಕೃಷ್ಣಾರ್ಜುನರು ಸಿಂಧು ದೇಶಕ್ಕೆ ಹೋದುದನ್ನು ಕವಿ ವರ್ಣಿಸಿದ್ದಾನೆ. ದುರ್ಯೋಧನನ ತಂಗಿ ದುಶ್ಯಲೆಯನ್ನು ಸೈಂಧವನಿಗೆ ಕೊಟ್ಟಿತ್ತು. ಮಹಾಭಾರತ ಯುದ್ಧದಲ್ಲಿ ಸೈಂಧವನು ಕೊಲ್ಲಲ್ಪಟ್ಟನು. ಗೆದ್ದ ಪಾಂಡವರು ತನ್ನ ಮಗನನ್ನು ಏನು ಮಾಡುವರೋ ಎಂದು ಕೌರವನ ತಂಗಿಯಾದ ದುಶ್ಯಲೆಗೆ (ದುಶ್ಶೀಲೆ ?) ಚಿಂತೆ. ಆಕೆ ಕೃಷ್ಣಾರ್ಜುನರಿಗೆ ಶರಣು ಬರುವಳು. ಜಯದ್ರಥ (ಸೈಂಧವ) ನ ಹೆಂಡತಿಯಾದ ದುಶ್ಶೀಲೆ ತನ್ನ ಮಗನನ್ನು ಅವರಿಗೆ ಒಪ್ಪಿಸುವಳು. ಈ ಸಿಂಧುದೇಶದಿಂದ ಕಷ್ಣಾರ್ಜುನರು ನೇರವಾಗಿ ಹಸ್ತಿನಾಪುರಕ್ಕೆ ಹೋದರು. ಅಶ್ವಮೇಧದ ಕುದುರೆಯ ತಿರುಗಾಟ ಮುಗಿಯಿತು. ಮೂಲ ಮಹಾಭಾರತದ ಅಶ್ವಮೇಧಿಕ ಪರ್ವದಲ್ಲಿಯೂ ಈ ಕಥೆ ಇದೆ. ಇದರ ಹಿಂದಿನ ಚಂದ್ರಹಾಸನ ಕಥೆ ಮೂಲ ಮಹಾಭಾರತದ್ದಲ್ಲ. ಚಂದ್ರಹಾಸಾಖ್ಯಾನ ಚೊಕ್ಕ ಜೈಮಿನಿ ಭಾರತದ ಕಟ್ಟಕೊನೆಯ ಕಥೆ. ೩೨ನೆಯ ಸಂಧಿಯ ೭-೧೨ ಪದ್ಯಗಳಲ್ಲಿ ಕುದುರೆ ತಿರುಗಿದ ದೇಶಗಳ ವರದಿಯಿದೆ. ಇದು ಸಂಗ್ರಹರೂಪವಾಗಿ ಕಾವ್ಯದ ಇತಿವೃತ್ತವನ್ನೇ ಹೇಳುವುದು.

ಚಂದ್ರಹಾಸನ ಕಥೆಯು ಸಾಲಿಗ್ರಾಮ ಶಿಲೆಯ ಮಹಿಮೆಯ ಕಥೆಯೆಂದು ಹೇಳಲಾಗಿದೆ (ಸಂಧಿ ೩೧; ಪ. ೭೮–೭೯). ಸಾಲಿಗ್ರಾಮದ ಕೇವಲ ಸಂಸರ್ಗದಿಂದ ಚಂದ್ರಹಾಸನಿಗೆ ಸಾಮ್ರಾಜ್ಯಪದವಿಯಾಯಿತೆಂದಮೇಲೆ 'ಬೇಕೆಂದು ಬಯಸಿ ಶ್ರದ್ಧೆಯಿಂ ಪ್ರತಿದಿನದೊಳರ್ಚಿಸುವ ನರನು ಆವ ಸಿದ್ಧಿಯಂ ಪಡೆದಪನೊ' (ಸಂ. ೩೧; ಪ. ೭೮). ಇದು ವೀರಶೈವರ ಇಷ್ಟಲಿಂಗದ ಮಹಿಮೆಗೆ ಪ್ರತಿಯಾದ ಮಹಿಮಾ ಕಥಾನಕವಿರಲಾರದಷ್ಟೇ? ಪ್ರಭುಲಿಂಗಲೀಲೆಯಲ್ಲಿಯೂ ಪ್ರಭುವಿನಸುತ್ತಲು ಶಿವಶರಣರ ಏರಿಕೆಯ ಕಥೆಗಳಿವೆ. ಇಲ್ಲಿ ಶ್ರೀಕೃಷ್ಣನ ಸುತ್ತಲು ರಚಿಸಿದ ನವೀನ ಕ್ಷಾತ್ರ ಭಾಗವತರ ಕಥೆಗಳಿವೆ. ಪ್ರಭುಲಿಂಗಲೀಲೆ ಸಾಮಾನ್ಯ ಜನರ ಬೆನ್ನು ಕಟ್ಟಿದರೆ, ಇದು ರಾಜಪಕ್ಷದವರಿಗೆ ಭಕ್ತಿಯತ್ತ ಎಳೆಯುತ್ತದೆ. (ಸಂಧಿ ೨೮; ಪ. ೨೩-೨೪).

---

* ಈ ಲೇಖನವನ್ನು ಮೊದಲು ಪ್ರಕಟಿಸಿದ 'ಪ್ರಬುದ್ಧ ಕರ್ನಾಟಕದ'ದ ಸಂಪಾದಕರಿಗೆ ವಂದನೆಗಳು. —ದ. ರಾ. ಬೇಂದ್ರೆ.

ಲಕ್ಷ್ಮೀಶ ತನ್ನ ವಿಶಿಷ್ಟ ಕೌಶಲವನ್ನನುಸರಿಸಿ ಚಂದ್ರಹಾಸನ ರಾಜ್ಯದತ್ತ ಕುದುರೆಯನ್ನು ಹೊರಳಿಸುವ ಪೂರ್ವದಲ್ಲಿ ಮಾಡಿದ ಸೃಷ್ಟಿವರ್ಣನೆಯಲ್ಲಿ ಬರಲಿರುವ ಕಥೆಯನ್ನೂ, ಅದನ್ನು ದಾಟುವದು ಸಾಧ್ಯ ಎಂಬ ಸೂಚನೆಯನ್ನೂ ಕೊಡುತ್ತಾನೆ. ಈ ವ್ಯಂಜನೆಯ ರೀತಿ ಇಮ್ಮುಖವಾಗಿದೆ. ಅರ್ಜುನನ ಹೃದಯದಲ್ಲಿ ಇನ್ನೂ ಕ್ಷಾತ್ರತಾಮಸವ ನಕ್ರವು ಅಡಗಿಕೊಂಡಿದೆ; ಆದರೆ ಅದನ್ನು ದಾಟಿಸಲು ಶ್ರೀಕೃಷ್ಣ ಸಹಾಯ ಮಾಡುತ್ತಾನೆ ಎಂಬ ಸೂಚನೆ ಮೊದಲನೆಯದು. ಆದರೆ ಅದಕ್ಕೂ ಸಮೀಪದ ಸೂಚನೆ ಚಂದ್ರಹಾಸಖ್ಯಾನದಲ್ಲಿಯೇ ಇದೆ. ಚಂದ್ರಹಾಸನ ಜೀವನದಲ್ಲಿ ದುಷ್ಟಬುದ್ಧಿಯು ಮೊಸಳೆಯನ್ನಡಗಿಸಿಕೊಂಡ ಮಡುವಿನ ತಿಳಿನೀರಿನಂತಿದೆ. ಈ ಗಂಡಾಂತರವನ್ನು ಚಂದ್ರಹಾಸನು ಶ್ರೀಕೃಷ್ಣನ ಕೃಪೆಯಿಂದ ದಾಟುವನು. ಈ ವ್ಯಂಜನೆಯ ಸಾಮ್ಯ ಕಾಲ್ಪನಿಕವಲ್ಲ. ಸಂಧಿ ೨೭ ಪದ್ಯ ೫೬ ಸಾಲು ೪-೫-೬ ಗಳನ್ನು ಸಂಧಿ೨೮ ಪದ್ಯ ೨೮ ಸಾಲು ೧ ೨-೩ ಇವುಗಳೊಂದಿಗೆ ತುಲನೆಮಾಡಿ ನೋಡಬೇಕು. ದುಷ್ಟಬುದ್ಧಿಯನ್ನು ಮೊಸಳೆಗಳುಳ್ಳ ಮಡುವಿಗೆ ಹೋಲಿಸಿದ್ದು ಅತಿ ಉಚಿತವಾಗಿದೆ. ನೋಡಿ: ಸಂಧಿ ೨೯; ಪದ್ಯ೨೪.

೨೮ನೆಯ ಸಂಧಿಯ ಪ್ರಾರಂಭದ ಋತುವಾನ ವರ್ಣನೆಯಲ್ಲಿ ವ್ಯಂಜನೆಯಿಂದ ಚಂದ್ರಹಾಸಾಖ್ಯಾನದಲ್ಲಿ ಶೃಂಗಾರ ವರ್ಣನೆ ಬರುವುದೆಂದೂ, ಒಬ್ಬ ಪರದೇಶಿ ಮಗುವಿನ ಕಥೆ ಬರುವುದೆಂದೂ, ಒಬ್ಬ ಶಾಂತಸ್ವಭಾವದವನಿಂದ ಒಬ್ಬ ಪ್ರತಾಪಿಯ ತೇಜ ತಣ್ಣಗಾಗುವುದೆಂದೂ ಕವಿ ಸೂಚಿಸಿದ್ದಾನೆ. ವಿಷಯೆಯ ಪ್ರಸಂಗ, ಚಂದ್ರಹಾಸನ ಬಾಲ್ಯ, ದುಷ್ಟಬುದ್ಧಿಯ ತೇಜೋಭಂಗ-ಇವೇ ಅವು ಎಂದು ಬೇರೆ ಹೇಳಬೇಕಾಗಿಲ್ಲ. ನೋಡಿ: ಸಂಧಿ ೨೯ ಪದ್ಯ ೨-೩-೪-೫. ಲಕ್ಷ್ಮೀಶನು ಹೇಮಂತಶಿಶಿರದ ವರ್ಣನೆಯ ವ್ಯಾಜದಿಂದ ತನ್ನ ವ್ಯಂಜನಾವಿಧಿ ( Suggestive Process ) ಯನ್ನು ಸಾಧಿಸುತ್ತಾನೆ. ಲಕ್ಷ್ಮೀಶನ ಕಾವ್ಯಕೌಶಲದ ವಿಶೇಷ ಇದೂ ಒಂದು.

ಚಂದ್ರಹಾಸನ ಕಥಾನಕದ ಇನ್ನೊಂದು ವಿಶೇಷವೆಂದರೆ ಇದರ ಪೂರ್ವದ ಕಥೆಗಳಂತೆಯೇ ಈ ಕಥಾನಕದೊಳಗಿನ ದೇಶ ಪಾತ್ರಗಳ ಹೆಸರುಗಳಿಂದ ಸೂಚಿತವಾಗುವ ಒಂದು ನೀತಿ. ಇದು ಭಾಗವತ ಸಂಪ್ರದಾಯದ ಎಲ್ಲ ಕಥೆಗಳಿಗೂ ಅನ್ವಯಿಸುವುದು. ಅದೇಕೆ ? ರಾಮಾಯಣ ಮಹಾಭಾರತಗಳಲ್ಲಿಯೂ ವೇದಗಳ ದಿವ್ಯ ವಾಕ್ಸರಣಿಯಲ್ಲಿಯೂ ನಾಮದ ಗುಹ್ಯಾರ್ಥ ತುಂಬಿರುವುದು ಸಂಪ್ರದಾಯವೇ ಆಗಿದೆ. ಉತ್ತಾನಪಾದನರಾಜನ ಹೆಂಡಿರು ಸುರುಚಿ ಮತ್ತು ಸುನೀತಿ; ಸುರುಚಿಯ ಮಗ ಉತ್ತಮ ಸುನೀತಿಯ ಮಗ ಧ್ರುವ. ರುಚಿಮಾರ್ಗಕ್ಕಿಂತ ನೀತಿಮಾರ್ಗ ಮೇಲು ಎಂಬುದು ಈ

ನಾಮಗಳ ಸಂಕೇತ. ಇದನ್ನು ತಿಳಿಯದ ರಾಜನು ಬುಡಮೇಲಾದ ಉತ್ತಾನಪಾದನಲ್ಲದೆ ಮತ್ತೇನು? ಚಂದ್ರಹಾಸನ ಕಥೆಯೂ ಭಾಗವತ ಸಂಪ್ರದಾಯವನ್ನು ಅನುಸರಿಸಿಯೇ ಕಟ್ಟಿದುದಾಗಿದೆ. ಚಂದ್ರನ ಬಗೆಗೆ ಲಕ್ಷ್ಮೀಶನಿಗೆ ಇರುವ ಪಕ್ಷಪಾತವು ತೀರ ಸ್ಫುಟವಾಗಿದೆ. ಲಕ್ಷ್ಮೀರಮಣನ ಆಸ್ಯಚಂದ್ರನು ನಮಗೆ ಆನಂದವನ್ನು ಕೊಡಲಿ' ಎಂಬ ಪ್ರಾರ್ಥನೆಯಿಂದ ಜೈಮಿನಿ ಭಾರತವು ಪ್ರಾರಂಭವಾಗುವುದು. ಕೃಷ್ಣನ ಕೀರ್ತಿಲತೆಯು ಆಚಂದ್ರಮಿರ್ಪಂತೆ ಕವಿ–ಮತಿಗೆ ಗೋಚರಿಸಿತಂತೆ. ಅಂತೆಯೇ ಕೃತಿಗೆ ನಾಯಕನಾದನು ಅಮರಪುರ ಲಕ್ಷ್ಮೀಶನು. ಜೈಮಿನಿಭಾರತದ ಕಥೆಯೇ ಚಂದ್ರವಂಶದ ರಾಜರನ್ನು ಕುರಿತು ಇದ್ದದ್ದು. ಇದರೊಳಗೆ ಅಶ್ವಮೇಧ ಸಂಬಂಧದಿಂದಲೂ ಬಭ್ರುವಾಹನ ಕಥಾವ್ಯಾಜದಿಂದಲೂ ರಾಮಚಂದ್ರನ ಕಥೆಯು ಸೇರಿಕೊಂಡಿತು. ಹೀಗಾಗಿ ಲಕ್ಷ್ಮೀಶನ ಕಲ್ಪನೆಗೆ ಚಂದ್ರಭಾವವು ಭಕ್ತಿ ಉದ್ದೀಪಕವಾಗಿದೆ. ಕವಿ-ಸಮಯದಂತೆ ಚಂದ್ರನು ಕಾಮ ಸಹಾಯಕ. ಕಾಮನೋ ಪ್ರದ್ಯುಮ್ನನಾಗಿ ಕೃಷ್ಣನ ಮಗನಾಗಿ ಬಂದ. ಅಂದ ಮೇಲೆ ಚಂದ್ರನೂ ವಿಷ್ಣುವಿನ ಬಳಗದವನೇ. ಕ್ಷೀರಸಾಗರಸಂಭೂತನಾದ್ದರಿಂದ ಅವನು ಲಕ್ಷ್ಮಿಯ ಸೋದರನೂ ಹೌದು. ಶೈವ ಕಲ್ಪನೆಯಲ್ಲಿ ಚಂದ್ರನು ಒಂದು ಶಿರೋಭೂಷಣ ಮಾತ್ರ. ಆದರೆ ವೈಷ್ಣವ ವಿಚಾರದಲ್ಲಿ ಚಂದ್ರನು ಹೃದಯಕ್ಕೆ ಸಂಬಂಧಿಸಿದವ. ಈ ಆಖ್ಯಾನದ ಮಟ್ಟಿಗೆ ವಿಷಯೆ-ಮದನರು ಬುದ್ಧಿಸುಜಾತರು. ಈ ಬುದ್ಧಿಯೇ ರಾಜನ ಅಂಕೆ ತಪ್ಪಿದ್ದರಿಂದ ದುಷ್ಟಬುದ್ಧಿಯಾಯಿತು. ಸಂಸ್ಕೃತ ಜೈಮಿನಿ ಭಾರತದಲ್ಲಿ ದುಷ್ಟಬುದ್ಧಿ ಎಂಬ ಹೆಸರಿಲ್ಲ. ದುಷ್ಟಬುದ್ಧಿಯು ತದ್ಭವ. ಧೃಷ್ಟಬುದ್ಧಿಯನ್ನು ಬೆಳೆಸಿದಂತೆ ಧೃಷ್ಟತನವೇ ದುಷ್ಟತನವಾಗುತ್ತದೆ. ಧೃಷ್ಟಬುದ್ಧಿಗೆ ಅರಸನಿದ್ದವನು ಕುಂತಲಪುರದ ಒಬ್ಬ ಅನಾಮಕ ರಾಜ. ಕುಂತಲಪುರವು ಕೂದಲದ ರಾಜ್ಯ—ತಲೆ, ತಲೆಯೊಳಗಿನ ಯಾವುದೋ ಒಂದು ಅವಿದಿತ ಶಕ್ತಿಯೇ ಅದನ್ನು ಆಳಬೇಕು. ಆದರೆ,

ಆ ನಗರಮೊಳ್ ಕುಂತಳೇಶ್ವರಂ ನಿರ್ಮಲ
ಜ್ಞಾನದಿಂ ಗಾಲವನ ಸೂಕ್ತಮಂ ಕೇಳುತೆ ಸ-
ದಾನಂದ ಯೋಗಮಂ ಕೈಕೊಂಡು ದುಷ್ಟಬುದ್ಧಿಗೆ ವಿಚಾರವ-
ನೊಪ್ಪಿಸಿ |
ಧ್ಯಾನಪರನಾಗಿರ್ಪನದರಿಂದ ಪೊಳಲಂ ಪ್ರ
ಧಾನಿ ಪಾಲಿಪನು.................................

ಸಂಧಿ ೩೧ ಪದ್ಯ ೪೩.

ಪುರುಷನ ಕೈತಪ್ಪಿ ರಾಜ್ಯ ಪ್ರಧಾನಿಗೆ ಸೇರಿತು ಎಂದರೆ ಬುದ್ಧಿ ದುಷ್ಟವಾಗುತ್ತದೆ. (ಪ್ರಧಾನ ಎಂದರೆ ಪ್ರಕೃತಿಗೆ ಹೆಸರು ಸಾಂಖ್ಯದಲ್ಲಿ; ಅವರಲ್ಲಿ ಬುದ್ಧಿ, ಅಹಂಕಾರ ತತ್ವಗಳು ಅಡಕವಾಗುತ್ತವೆ). ಇಂಥ ದುಷ್ಟಬುದ್ಧಿಯ ಮಗ ಮದನ ಪೂರ್ವ ಕರ್ಮದಿಂದ ವಿಷ್ಣುಭಕ್ತ. ಅವನ ಸಭೆಯಲ್ಲಿ ಕೃಷ್ಣಚರಿತ್ರವನ್ನು ಸೊಗಸಾಗಿ ರಚಿಸುವ ಭಾವುಕರ ಸಂಗೀತಗೋಷ್ಠಿಯ ಸತ್ಸಂಗ ಪ್ರಸಂಗ ಅವನಿಗೆ ಯಾವಾಗಲೂ ಇತ್ತು. ಇದಲ್ಲದೆ ಅವನು ಶಂಕರಪ್ರಿಯ. "ಕಂದ ನೀನಚ್ಯುತ ಪರಾಯಣಂ ಶಿವ ಪೂಜಕಂ" ( ಸಂ. ೩೧; ಪ ೬೦ ) ಎಂದು ದುಷ್ಟಬುದ್ಧಿಯೇ ತನ್ನ ಮಗನನ್ನು ಕುರಿತು ಪ್ರಲಾಪಿಸುವಾಗ ಹೇಳುತ್ತಾನೆ. ಮದನನು ಹರಹರಿ ವಿಭೇದ ಮಾಡದ ಪರಮ ಭಾಗವತ. ಇನ್ನು ವಿಷಯೆಯೋ, ದೈವಾಯತ್ತವಾಗಿ ವಿಧಿಪ್ರಚೋದನೆಯಿಂದೇ ಎಂಬಂತೆ (ತನ್ನ ಕರ್ಮಪರಿಪಾಕಫಲವಾಗಿಯೂ ಹೌದು) ವಿಷ್ಣುಭಕ್ತನ ಸತಿಯಾದಳು. ವಿಷಯಾರ್ಪಣದ ರೀತಿಯಲ್ಲಿ ಉನ್ನತಿ-ಅವನತಿಯಿವೆ. ಈ ಇಬ್ಬರು ಮಕ್ಕಳ ಪುಣ್ಯದಿಂದಲೇ ದುಷ್ಟಬುದ್ಧಿಯು ತನ್ನ ದುಷ್ಟತನವನ್ನು ಕಳೆದುಕೊಂಡು ಹೋದ ಪ್ರಾಣವನ್ನು ಮರಳಿ ಪಡೆದು ಕೃಷ್ಣ ದರ್ಶನವಾಗುವವರೆಗೂ ಬಾಳಿಯೇ ಇದ್ದ. "ಇಂದಿರಾವಲ್ಲಭನ ದರ್ಶನಕೆ ದುಷ್ಟಬುದ್ಧಿ ನಿಜ ಸೂನು ಸಹಿತ ಬಂದು ನಿರ್ಧೂತ ಕಿಲ್ಬಿಷನು" (ಸಂ. ೩೨. ಪ. ೧೯.). ( ಚಂದ್ರಹಾಸನ ತಂದೆ ಮೇಧಾವಿ, ಅವನ ಸಾಕುತಾಯಿ ಮೇಧಾವಿನಿ—ಇದೂ ಅರ್ಥಪೂರ್ಣವಾಗಿದೆ.) ದುಷ್ಟಬುದ್ಧಿ ಮತ್ತು ಮದನನ ಪರಿಕರದಲ್ಲಿಯೂ ತುಂಬ ಭೇದವಿತ್ತು. ಮದನನ ಅರಮನೆಗೂ ಏಳು ಬಾಗಿಲು. ಏಳನೆಯ ಬಾಗಿಲಲ್ಲಿ ವಿವೇಕನೆಂಬವನು ಶ್ರದ್ಧಾಯಷ್ಟಿಯನ್ನು ಹಿಡಿದು ದ್ವಾರಪಾಲನ ಮಾಡುತ್ತಾನೆ. ಅವನೇ ಮದನನಿಗೆ ಆಪ್ತಸೇವಕ ( ಸಂ. ೩೦. ಪ. ೪೬. ) ದುಷ್ಟಬುದ್ಧಿಗೋ ಹಿಂಸಾಯಷ್ಟಿ ಹಿಡಿದ ಕ್ರೋಧನೆಂಬ ದ್ವಾರಪಾಲಕನು ಆಪ್ತಸೇವಕನು. ವಿವೇಕ ಶ್ರದ್ಧಾಯುತವಾದ ಕಾಮವೂ ಉದ್ಧಾರವಾಗುತ್ತದೆ. ಅದು ಈಶ್ವರಾರ್ಪಣ ಬುದ್ಧಿಯಿಂದ ಮೇಲ್ಮೆಯಾಗುತ್ತದೆ. ಹಿಂಸಾ ಕ್ರೋಧಗಳಿಂದ ಕೂಡಿದ ಬುದ್ಧಿ ವಿನಾಶಕ್ಕೆ ಎಳೆಯುತ್ತದೆ. ದುಷ್ಟಬುದ್ಧಿಯೇ ಉದ್ಧಾರವಾದದ್ದು ತಾನು ತನ್ನ ಆತ್ಮವೆಂದು ತಿಳಿದ ಮದನನ ಪ್ರೀತಿಯಿಂದ. ಈ ನೀತಿ ಕಥಾಭಾಗವು ಭಗವದ್ಗೀತೆಯ

ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ |
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಭಿಜಾಯತೇ ||
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ |
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ||

೨-೬೨,೬೩.

ಎಂಬ ಶ್ಲೋಕಗಳಿಗೆ ಸುಂದರ ಟೀಕೆ ಇದ್ದಂತೆ ಇದೆ.

೨

ಈ ಕಥೆಯು ದೈವವಿಲಾಸವನ್ನು ಹೇಳುವ ಉತ್ತಮ ಕಥೆ. ಜಗತ್ಕಥಾ ಪ್ರಪಂಚದಲ್ಲಿ ಇದು ಸೇರ್ಪಡೆಯಾಗಿರುವುದೆಂದು ಮಾನ್ಯ ವಿಂಟರನಿಝು ಅವರು ತಮ್ಮ ಸಂಸ್ಕೃತಸಾಹಿತ್ಯದ ಇತಿಹಾಸದಲ್ಲಿ ಹೇಳುತ್ತಾರೆ. ಕೇವಲ ದೈವ ಸಹಾಯದಿಂದ ದುಷ್ಟಬುದ್ಧಿಯ ಕುತಂತ್ರಗಳನ್ನೆಲ್ಲ ಸಹಜಲೀಲೆಯಿಂದ ದಾಟಿ ಅರಸನಾಗಲು ಹುಟ್ಟಿದ ಪರದೇಶಿ ಮಗುವಿನ ಕಥೆಯಿದು. ಶೈವಕಥಾನಕಗಳಲ್ಲಿ ನಂಬಿಯಣ್ಣನ ಕಥೆಯು ವಿಲಾಸ ಇನ್ನೊಂದು ಬಗೆಯದಾಗಿದೆ. ಚಂದ್ರಹಾಸನ ಕಥೆ ನಂಬಿಯಣ್ಣನ ಇತಿಹಾಸಕ್ಕಿಂತ ಪ್ರಾಚೀನವಾದುದೋ ಇಲ್ಲವೋ ಹೇಳಲು ಬಾರದು. ಮೊದಲಿನಿಂದ ಕೊನೆಯ ವರೆಗೆ ಈ ಆಖ್ಯಾನದಲ್ಲಿ ವಿಧಿವಿಲಾಸವು ಕಂಡುಬರುವದು. ಕಷ್ಟದಂತೆ ಕಷ್ಟಪರಿಹಾರವೂ ದೈವಿಕವಾಗಿಯೇ ಬರುವುದು.

" ಕಾವರಾರ್ ಕೊಲ್ವರಾರ್ ಅಳಿವರಾರ್ ಉಳಿವರಾರ್
ಭಾವಿಪೊಡೆ ವಿಷ್ಣುಮಾಯಾಮಯಂ ಇದು "

ದುಷ್ಟಬುದ್ಧಿಗೆ ಕೂಡ ಈ ವಿಚಾರ ಹೊಳೆಯದೆ ಹೋಗುವದಿಲ್ಲ. 'ಪೊಸತಲಾ ದೈವಕೃತಂ' (ಸಂ. ೩೧ ಪ. ೫೦), "ಅರಿದರಿದು ಪರಹಿಂಸೆಯುಂ ಮಾಡಿ ಮಾನವಂ ಬಾಳ್ದಪನೆ........ದೀಪಮಂ ಕೆಡಿಸುವ ಪತಂಗದಂತೆ ನಮ್ಮುಪಾಯವೆನವುಗಪಾಯಮಂ ತಂದುದು" (ಸಂ ೩೧ ಪ. ೫೩), "ಋಷಿಗಳಾಡಿದ ಮಾತು ಪುಸಿಯದು; ಲೋಕದೊಳ್ ವಿಧಿಲಿಖಿತಮಂ ನಿವಾರಿಪರುಂಟೆ?" (ಸಂ. ೩೧, ಪ. ೩೫-೩೬) ಇವು ದುಷ್ಟಬುದ್ಧಿಯಾಡಿದ ಮಾತು. ಹೀಗಿದ್ದೂ ದುಷ್ಟಬುದ್ಧಿಯು ದೈವದ ವಿರುದ್ಧ ಹೋರಾಡುತ್ತಾನೆ. ಸುಬುದ್ಧಿ-ದುರ್ಬುದ್ಧಿಗಳ ಭೇದ ಸ್ವಲ್ಪದರಲ್ಲಿದೆ. ಒಂದು ದೈವಾನುಕೂಲವಾಗಿ ಪೌರುಷವನ್ನೆಸಗುತ್ತದೆ, ಇನ್ನೊಂದು ತನ್ನ ಪೌರುಷದಿಂದ ದೈವವನ್ನು ಸುಳ್ಳುಮಾಡುವ ವಿಫಲ ಪ್ರಯತ್ನದಲ್ಲಿ ತೊಡಗುತ್ತದೆ. ಧೃಷ್ಟತೆಯು ದುಷ್ಟತೆಯಾಗುವುದೂ, ಸುಯೋಧನನು ದುರ್ಯೋಧನನಾಗುವುದೂ ಈ ಹಾದಿಯಲ್ಲಿಯೇ.

ವಿಷ್ಣುಭಕ್ತಿಯನ್ನು ಪರಿಪೂರ್ಣವಾಗಿ ಪರಿಪಾಕಗೊಳಿಸುವುದೇ ಈ ಆಖ್ಯಾನದ ವಿಶೇಷ ಉದ್ದೇಶವಾಗಿರುವುದು. 'ಶತಪತ್ರನಾಭನ ಭಕ್ತಿ ದೃಡವಾಗಲಿ ಈತನ ಚರಿತ್ರಮಂ ಕೇಳ್ದವರ್ಗೆ' ಎಂದು ಹರಿ ವರವನಿತ್ತನಂತೆ ಚಂದ್ರಹಾಸನಿಗೆ (ಸಂ. ೩೨, ಪ. ೨೬). ದೇವಿಯು ಕೂಡ 'ನಿನ್ನ ಚರಿತವನೋದಿ ಕೇಳ್ವವರ್ಗೆ ಮಿಗೆ ವರ್ಧಿಪುದು ಮುಕುಂದಾಭಿರತಿ ಮುಂದೆ ಕಲಿಯುಗದೊಳ್ ಎನ್ನಾಜ್ಞೆಯಿದು' (ಸಂ.೩೧ ಪ. ೭೦).

ಚಂದ್ರಹಾಸನು ಕೂಡ ತನ್ನ ಪ್ರಜಾಜನರಿಗೆ 'ನೀವೆಲ್ಲರುಂ ಕೃಷ್ಣ ಭಜನೆಗೆಯ್ವುದು ಎಂದು ಸಾರಿದಂ ಬೇಡಿಕೊಳುತೆ' (ಸಂ. ೩೧, ಪ. ೭೫). ದೇವಿಯಲ್ಲಿ ಚಂದ್ರಹಾಸ ಬೇಡಿಕೊಂಡ ಮೊದಲನೆಯ ವರ 'ಆವ ಜನ್ಮಾಂತರದೊಳಗೆ ರಾಜೀವನಾಭನ ಭಕ್ತಿ ದೊರೆಕೊಳಲಿ' ಎಂಬುದೇ. ಇವನು ಹುಟ್ಟಿದ ದಿನವೇ ಮಾತಾಪಿತರನ್ನು ಕಳೆದು ಕೊಂಡವನು. ಚಿಕ್ಕಂದಿನಲ್ಲಿಯೇ ಸಾಕುತಾಯಿಯನ್ನು ಕಳೆದುಕೊಂಡು ದೇಶಿಗನಾದ. ದೈವದಿಂದ ದೊರಕಿದ ಸಾಲಗ್ರಾಮದ ಪೂಜಕನಾದ. ಕೊಲೆಗಡಕರು ಕೊಲ್ಲಲು ಬಂದಾಗ 'ದಿವ್ಯ ಸಾಲಗ್ರಾಮದುಪಲದತಿಮಹಿಮೆಯಿಂದ ಬಗೆ ತೋರಲು ಆಗ ಮುರಹರ, ಕೃಷ್ಣ, ಕಮಲಾಕ್ಷ, ಖಗರಾಜಗಮನ, ಸಲಹು' ಎಂದು ಚೀರಿದನಂತೆ. ಕಿರಾತರೊಡನೆ ಕುಳಿಂದಕನು ಅಡವಿಯಲ್ಲಿ ಬಂದಾಗ ಚಂದ್ರಹಾಸ ಬಾಲಕನು 'ತನ್ನ ತಾಯ್ತಂದೆಗಳನು ಒಡಹುಟ್ಟಿದವರ ಹಂಬಲಿಸದೆ ಮುರಾರಿಯಂ ನೆನೆವನು' (ಹರಿ ಯನೇ ಜಪಿಸುತ ಆಳುತಿಹ ಬಾಲನಂ ಕಂಡು, ಸಂ. ೨೮, ಪ. ೫೪). 'ಅದರಿಂದ ವಂಗೆ ಒಡೆಯನು ಅಚ್ಯುತನು' ಎಂದು ಪುಳಿಂದನ ತರ್ಕ. ಇವನನ್ನು ಅಕ್ಷರಾಭ್ಯಾಸ ಕಿರಿಸಿದೊಡೆ "ಹರಿಯೆಂಬೆರಡು ವರ್ಣಮಲ್ಲದೆ ಪೆರತನು ಅಕ್ಷಿಯಿಂದ ಈಕ್ಷಿಸದೆ ವಾಚಿ ಸದೆ" ಇದ್ದನಂತೆ ( ಸಂ. ೨೯, ಪ. ೪ ). ಇವನು ಬಾಲಕ್ರೀಡೆ ಯಲ್ಲಿಯೂ ಗೆಳೆಯರೊ ಡನೆ ವೈಷ್ಣವಭಕ್ತಿಯ ಆಟಗಳನ್ನೇ ಆಡುತ್ತಿದ್ದನು. ದೊಡ್ಡವನಾದ ಮೇಲೆ " ವಿದಿತ ವೇದಾರ್ಥಮಂ ವಿಷ್ಣುವೆಂದು ಅರಿತು, ಬಹುವಿಧ ಶಾಸ್ತ್ರತತಿಗೆ ಹರಿಯೆ ಗತಿಯೆಂದು ತಿಳಿದು....ನಿಜಭಕ್ತಿ ಚಾಪಕೆ ಸತ್ವಗುಣಗಳನು ಅಳವಡಿಸಿ ತನ್ನ ಸುಧಿಯ ಶರಮಂ ಮಾಡಿ ಕೃಷ್ಣನಂ ಗುರಿಮಾಡಿ ವಿಧುಹಾಸನು ಅನುಪಮ ಧನುರ್ವಿದ್ಯೆಯಂ ಜಗದೊಳು ಅಧಿಕತರಮಾಗಿ ಸಾಧಿಸಿ ಪರಮ ಭಾಗವತ ಕಲೆಗಳಿಂದ ಎಸೆದಿರ್ದನು. " ( ಸಂ.೨೯, ಪ. ೮ ). ಚಂದ್ರಹಾಸನನಿಗೆ ಭಕ್ತಿಯೇ ಚಾಪ, ಸತ್ವವೇ ಗುಣ ( ಹೆದೆಯ ಹಾರ ), ತನ್ನ ಬುದ್ಧಿಯೇ ಶರ, ಕೃಷ್ಣನೇ ಗುರಿ.

ಚಂದ್ರಹಾಸನ ಚರಿತ್ರೆಯಿಂದ ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಯಾವ ಪಾಠ ಕಲಿತರೋ ಇಲ್ಲವೋ ಇದನ್ನು ಹೇಳಲು ಸಾಧನೆ ಯಿಲ್ಲ. ಆದರೂ ಸಂಸ್ಕೃತ ಜೈಮಿನಿ ಭಾರತವು ಮಾತ್ರ ಶ್ರೀ ರಾಮಾನುಜಾಚಾರ್ಯರ ಅನಂತರದಲ್ಲಿ ಅಷ್ಟೇಕೆ, ಶ್ರೀ ಮಧ್ವಾಚಾರ್ಯರ ಅನಂತರದಲ್ಲಿ ರಚಿತವಾಗಿರಬೇಕೆಂದು ತೋರುವದು. ಅದರಂತೆಯೇ ಲಕ್ಷ್ಮೀಶನ ಜೈಮಿನಿ ಭಾರತವೂ ಕರ್ನಾಟಕದಲ್ಲಿ ಭಕ್ತಿಮತದ, ಪುಂಡಲೀಕ ಭಕ್ತಿಮತದ ಪುನರುದ್ಧಾರ ಕಾಲವಾದ ಶ್ರೀ ವ್ಯಾಸ, ಪುರಂದರದಾಸರ ಸಮಕಾಲದಲ್ಲಿ ಹುಟ್ಟಿರಬೇಕು ಎಂದು ತೋರುತ್ತದೆ. ಚಂದ್ರಹಾಸನು ಭಾಗವತ ಪುರಾಣದಲ್ಲಿ ಪ್ರಖ್ಯಾತರಾದ ಧ್ರುವ, ಪ್ರಲ್ಹಾದ, ರುಕ್ಮಾಂಗದ, ಬಲಿಗಳಂತೆ

ಅಷ್ಟೇ ಅಲ್ಲದೆ "ಕೀರ್ತಿಯಿಂ ಪುಂಡರೀಕನಾಗಿದ್ದ "ನಂತೆ ಈ ಪುಂಡರೀಕನು ಶ್ರೀ ವಿಠ್ಠಲ ಭಕ್ತನಾದ ಪುಂಡಲೀಕನೆಂದೇ ತೋರುತ್ತದೆ. ಪುಂಡಲೀಕನ ಹೆಸರು ಮೂಲ ಸಂಸ್ಕೃತ, ಜೈಮಿನಿಯಲ್ಲಿ ಈ ಸಂದರ್ಭದಲ್ಲಿಯೂ ಬಂದಿಲ್ಲ, ಇಡಿಯ ಗ್ರಂಥದಲ್ಲಿಯೂ ಬಂದಿಲ್ಲ. ವ್ಯಾಸ ಪುರಂದರದಾಸರ ಸಮಕಾಲೀನನಾದ ಕನಕದಾಸನು ತನ್ನ "ಮೋಹನತರಂಗಿಣಿ" ಯಲ್ಲಿ ಬಕದಾಲ್ಭ್ಯ, ಪುಂಡರೀಕ, ಅರ್ಜುನ, ತಾಮ್ರಧ್ವಜರನ್ನು ( ಮಾಂಧಾತವ್ಯಾಜ ದಿಂದ ) ವಿಷ್ಣುಭಕ್ತರೆಂದು ಹೊಗಳುತ್ತಾನೆ. ಇವರು ಲಕ್ಷ್ಮೀಶನ ಜೈಮಿನಿ ಭಾರತ ಕೀರ್ತಿತರು.

ಚಂದ್ರಹಾಸನು ಒಬ್ಬ ಮೂಕ ನಾಯಕ. ಕೊಲ್ಲಲು ಬಂದರೂ ಹರಿನಾಮ, ಕಡಿಯಲು ಬಂದರೂ ಹರಿನಾಮ, ಕಲಿತರೂ ಹರಿನಾಮ, ಕೇಳಿದರೂ ಹರಿನಾಮ, "ಕನ್ಯಾವರಣದೊಳ್ ಕುಲಪರಂಪರೆಯನು ಒರೆಯೆನಲ್ಕೆ ಶಶಿಹಾಸನು, ಎನಗೆ ವಾಮನ ಗೋತ್ರ, ಅರವಿಂದನಾಭಂ ಪಿತಂ, ಹರಿ ಪಿತಾಮಹಂ, ಮುರಹರಂ ಪ್ರಪಿತಾಮಹಂ" ಎಂದು ಅಲ್ಪ ಭಾಷಿತಮಲ್ಲದ ಸುಜಲ್ಪಿತವನು ಆಡುವನು (ಸಂ. ೩೧; ಪ. ೧೫-೧೬) ಚಂದ್ರಹಾಸನು ಬಾಯ್ದೆರೆದದ್ದು ಎಂದರೆ ಈ ಆಖ್ಯಾನದಲ್ಲಿ ದೇವಿಯನ್ನು ಸ್ತುತಿಸು ವಾಗ ಒಮ್ಮೆ, ಕೃಷ್ಣದರ್ಶನವಾದಾಗ ಮತ್ತೊಮ್ಮೆ. ಪ್ರತ್ಯಕ್ಷ ಕೃಷ್ಣನೆ "ನೋಡಿರ್ದೆ ಪಾರ್ಥ ವೈಷ್ಣವ ಶಿರೋಮಣಿಯಂ'' ಎಂದು ಒಂದು ಮಾತಿನಲ್ಲಿ ಅವನ ಬಗ್ಗೆ ಹೇಳುತ್ತಾನೆ. '' ಮೂಡಿ ಮುಳುಗುವ ಮಾಧವಧ್ಯಾನ ಚೇತನದ, ಸೂಡಿದ ಮುಕುಂದ ಪಾದಾಬ್ಜ ಮಸ್ತಕದ, ಸತ್ವಗುಣದ ಬೀಡೆನಿಪ ಕಲಿ ಚಂದ್ರಹಾಸ" (ಸಂ. ೩೨. ಪ. ೯). ''ಸಿಕ್ಕಿದೊಡೆ ಕೃಷ್ಣದರ್ಶನದ ಪುಣ್ಯವೆ ಸಾಕು. ಮಿಕ್ಕ ಸುಕೃತದ ಗಸಣಿಯೇಕೆ" ಎಂಬುದು ಇವನ ಮತ (ಸಂ. ೩೨; ಪ. ೪). ಇವನಿಗೆ ಕೃಷ್ಣನು " ಧ್ಯಾನಿಸುವನು ಆಬಾಲ್ಯದಿಂದ ಎನ್ನನು, ಈತಂಗೆ ಆನು ಒಲಿದೆನು. ಎಂದು ನಿಜ ರೂಪಮು" ತೋರಿದನಂತೆ. ಇವನ ಸಲುವಾಗಿ "ತನ್ನ ಮಾರ್ಗಗತಿ ಲೇಸು ಅನ್ಯರೆಸಗುವಂದದೊಳಾಚರಿಸೆ ಭಯಾವಹಂ'' (ಸಂ. ೩೨ ಪ. ೧೩.) " ಸ್ವಧರ್ಮೇನಿಧನಂ ಶ್ರೇಯಃ ಪರಧರ್ಮೋಭಯಾವಹಃ" ಎಂಬ ಪೂರ್ವದ ಗೀತಾವಚನವನ್ನು ಸದ್ಯಕ್ಕೆ ತಿರಸ್ಕರಿಸಿ '' ತನ್ನ ಶರಣರ ಜೀವನವೆ ತನಗೆ ಜೀವನಂ, ತನ್ನ ಶರಣರ್ ಬೇರೆ ತಿಳಿಯೆ ತಾಂ ಬೇರಲ್ಲ. ತನ್ನ ಶರಣರ ಹೃದಯಕಮಲದೊಳ್ ಪ್ರತ್ಯಕ್ಷಮಾಗಿ ತಾನಿರುತಿರ್ದನು'' (ಸಂ. ೩೨. ಪ. ೧೫) ಆದ್ದರಿಂದ ಕ್ಷತ್ರಿಯನು ಯುದ್ಧಧರ್ಮವನ್ನು ಬದಿಗಿಟ್ಟು ತನ್ನ ಪ್ರತಿಪಕ್ಷಿಯು ವೈಷ್ಣವಭಕ್ತನಾಗಿದ್ದರೆ, ಅವನೊಡನೆ ಸಖ್ಯ ಬೆಳೆಸುವುದೇ ಹೆಚ್ಚಿನ ಧರ್ಮವೆಂದು ಭಗವದ್ಗೀತೆಯ ನಂತರದ ಭಾಗವತ ಧರ್ಮವನ್ನು ಸಾರಿದ್ದಾಗಿದೆ ಈ ಕಥೆಯಲ್ಲಿ. ಹೀಗಿದೆ ಈ ಆಖ್ಯಾನದ ಮೇಲ್ಮೆ.

——

# ಜ್ವಾಲೆಯ ಕಥೆ

**ಕಥಾ ರಚನೆ:—** ಜ್ವಾಲೆಯ ಕಥೆಯು ಮೂಲ ಮಹಾಭಾರತದಲ್ಲಿಲ್ಲ. ರಾಜಸೂಯದ ಕಾಲಕ್ಕಾದ ದಿಗ್ವಿಜಯದಲ್ಲಿ ದಕ್ಷಿಣದಿಕ್ಕಿಗೆ ಒಬ್ಬ ನೀಲಧ್ವಜನೆಂಬ ಅರಸನು ಇದ್ದುದಾಗಿ ಬಂದಿದೆ. ಅವನ ರಾಜಧಾನಿ ಮಾಹಿಷ್ಮತಿಯೇ; ಅವನಿಗೆ ಅಗ್ನಿಯ ಸಹಾಯವೂ ಇದ್ದಿತು. ಮಹಾಭಾರತದ ಅಶ್ವಮೇಧಪರ್ವದಲ್ಲಿ ನೀಲ ಧ್ವಜನ ಹೆಸರು ಬರುವದಿಲ್ಲ. ಜ್ವಾಲೆಯ ಕಥೆಯು ಮತ್ತಾವ ಪುರಾಣದಲ್ಲಿಯೂ ಬಂದಿಲ್ಲ.

ಅಂಬೆಯು ಹೇಗೆ ಛಲತೊಟ್ಟು ಭೀಷ್ಮನ ಸೇಡು ತೀರಿಸಿಕೊಂಡಳೆಂಬ ಕಥೆಯನ್ನು ವ್ಯಾಸರು ಹೇಳಿದ್ದಾರೆ. ಜೈಮಿನಿಯು ಅದರ ಛಾಯೋಪ ಜೀವನವನ್ನು ಮಾಡಿಯೇ ಜ್ವಾಲೆಯ ಕಥೆ ಕಟ್ಟಿದ್ದಾನೆ. ವಿಫಲಪ್ರಯಣಳಾದ ಅಂಬೆಯ ಬಗ್ಗೆ ಹುಟ್ಟುವಕರುಣೆಯು ಕೇವಲ ಛಲಗಾತಿಯಾದ ಜ್ವಾಲೆಯ ಬಗ್ಗೆ ಹುಟ್ಟು ವದಿಲ್ಲ. ದ್ವೇಷವು ಜನ್ಮಜನ್ಮಾಂತರವನ್ನು ಬೆಂಬತ್ತಿ ಬಂದುದರ ಉದಾಹರ ಣೆಯಿದು. ಜ್ವಾಲೆಯ ಕಥೆಯನ್ನು ಕಟ್ಟುವಲ್ಲಿ ಇನ್ನೊಂದು ದಂತ ಕಥೆಯನ್ನೂ ಉಪಯೋಗಿಸಿಕೊಂಡಂತಿದೆ. ಖಾಂಡವ ದಹನ ಕಾಲದಲ್ಲಿ ತಪ್ಪಿಸಿ ಹೊರಟ ಬಂದ ಸರ್ಪವನ್ನು ಅರ್ಜುನನು ತುಂಡರಿಸಿದನು. ಅದರ ತಲೆಯು ಕರ್ಣನ ಬತ್ತಳಿಕೆಯಲ್ಲಿ ಸರ್ಪಬಾಣವಾಯಿತು. ಕರ್ಣನು ಬಾಣವನ್ನು ಹೂಡಿ ಅರ್ಜುನನ ಮೇಲೆ ಎಸೆ ದಾಗ ಕೃಷ್ಣನು ಚಾತುರ್ಯದಿಂದ ರಥವನ್ನು ನೆಲಕ್ಕೊತ್ತಿ ಬಾಣವು ಕಿರೀಟಕ್ಕಷ್ಟೆ ತಗಲುವಂತೆ ಮಾಡಿದನು. ಆಗ ಆ ಸರ್ಪವು "ನನ್ನನ್ನು ಇನ್ನೊಮ್ಮೆ ತೊಡು ನಾನು ಅರ್ಜುನನ ಪ್ರಾಣಹರಣ ಮಾಡುವೆನೆಂದು" ಬೇಡಿಕೊಂಡರೂ, ಒಮ್ಮೆ ತೊಟ್ಟ ಬಾಣವನ್ನು ಇನ್ನೊಮ್ಮೆ ತೊಡೆನೆಂದು ಕುಂತಿಗೆ ಕೊಟ್ಟ ವಚನಕ್ಕಾಗಿ ಕರ್ಣನು ಆ ಬಾಣವನ್ನು ಮರಳಿ ಹೂಡಿ ಎಸೆಯಲಿಲ್ಲ. ವಿಫಲ ಮನೋರಥವಾದ ಆ ಸರ್ಪವು ಬಭ್ರುವಾಹನ ಮೂಡಿಗೆಯಲ್ಲಿ ಅಂಬಾಗಿ ಮುಂದೆ ಅರ್ಜುನನ ಶಿರವನ್ನು ಕತ್ತರಿಸಿತು ಎಂದೊಂದು ಕಥೆಯಿದೆ. ಜ್ವಾಲೆಯೇ ಆ ಬಾಣವಾದಳೆಂದು ಜೈಮಿನಿಯು ಕಲ್ಪಿ ಸಿದ್ದಾನೆ. ಅಂತೂ ಐತಿಹಾಸಿಕ ನೀಲಧ್ವಜನಿಗೆ ಅಂಬೆಯ ಛಾಯಮೂರ್ತಿಯಾದ ಜ್ವಾಲೆಯನ್ನು ಜೊತೆಗೊಟ್ಟು, ಸರ್ಪದ ಸೇಡಿನ ಕಥೆಯನ್ನು ಇನ್ನೊಂದು ರೂಪ ದಲ್ಲಿ ಈಕಟ್ಟುಕಥೆಗೆ ಸೇರ್ಪಡೆ ಮಾಡಿ, ನೀಲಧ್ವಜನ ಕಥೆಯಲ್ಲಿ ಉಂಟಾಗುವ ಕುತೂಹಲವನ್ನು ಬಭ್ರುವಾಹನನ ಕಥೆಯುವರೆಗೆ ಆಕರ್ಷಿಸಿದ್ದಾಗಿದೆ.

**ರೂಪಕ:—** ನೀಲಧ್ವಜ, ಸ್ವಾಹಾ, ಜ್ವಾಲೆ, ಅಗ್ನಿ, ಉನ್ಮುಖ ಮೊದಲಾದ ಅಗ್ನಿ ಸಂಬಂಧಿಕವಾದ ಪಾತ್ರಗಳ ಕಲ್ಪನೆಯಿಂದ ಛಲದ ಕೋಪಜ್ವಾಲೆಯು ತಾನು ನಂದಿಹೋದರೂ ಇನ್ನೊಂದನ್ನು ಬೂದಿಮಾಡದೆ ಬಿಡುವದಿಲ್ಲ ಎಂಬುದನ್ನು ನಿದರ್ಶನೆಗೆ ತಂದುಕೊಡುವ ಪ್ರಯತ್ನವು ಈ ಕಥೆಯಲ್ಲಿ ಮಾಡಿರಬಹುದಾಗಿ ಭಾಸವಾಗುವದು. ಏನಾದರೂ, ಅಗ್ನಿದೇವತೆಯು ಭಗವದ್ಭಕ್ತನಿಗೇ ಕೊನೆಗೂ ಅನುಕೂಲವಾಗುವದು.

**ಮುಖ್ಯಪಾತ್ರ:—** ನೀಲಧ್ವಜ ಪ್ರಕರಣದಲ್ಲಿ ಜ್ವಾಲೆಯೇ ನಾಯಕಪಾತ್ರವು. ಜ್ವಾಲೆಯ ಇದಿರು ನೀಲಧ್ವಜನು ಉರಿಯ ಇದಿರು ಹೊಗೆ ಇದ್ದಂತೆ. ಜ್ವಾಲೆಯು ಅಗ್ನಿಯ ಉರಿನಾಲಿಗೆಯು, ನೀಲಧ್ವಜನು ಅದರ ಕಪ್ಪು ಹೊಗೆಮಾತ್ರ. ಶರಣು ಬಂದವರನ್ನು ರಕ್ಷಿಸುವ ಕ್ಷಾತ್ರ ಸಾತ್ತ್ವಿಕ ಪ್ರಕೃತಿಯನ್ನು ಅಗ್ನಿಯಲ್ಲಿಯೂ ಪಂತದಿಂದ ಕಾದಾಡಲು ಬಂದವರನ್ನು ಛಲದಿಂದಾದರೂ ಕೊಲ್ಲುವ ಕ್ಷಾತ್ರರಾಜಸ ಪ್ರಕೃತಿಯನ್ನು ಜ್ವಾಲೆಯಲ್ಲಿಯೂ, ದೈವವೆ ಪ್ರತಿಕೂಲವಿದ್ದಾಗ ಸೋಲನ್ನು ಅಪ್ಪಿ ಒಪ್ಪಿಕೊಂಡು ಹತ್ತರಕೂಡ ಹನ್ನೊಂದು ಎಂದು ಬಾಳುವ ಕ್ಷಾತ್ರ ತಾಮಸಪ್ರಕೃತಿಯನ್ನು ನೀಲಧ್ವಜನಲ್ಲಿಯೂ ಜೈಮಿನಿಯು ಮೂಡಿಸಿದ್ದಾನೆ.

ಪ್ರತ್ಯಕ್ಷ ಅಗ್ನಿಯ ಮಂತ್ರಾಲೋಚನೆಯಂತೆ ಅರ್ಜುನನೊಡನೆ ಸಂಧಿಗೊಪ್ಪಿದ ನೀಲಧ್ವಜನು ಮತ್ತೆ ಜ್ವಾಲೆಯ ಮಾತಿಗೆ ಯುದ್ಧಪ್ರದೀಪ್ತನಾದುದನ್ನು ನೋಡಿದರೆ ನೀಲಧ್ವಜನಲ್ಲಿ ಸ್ವಯಂ ಪ್ರಭುತ್ವವಿರಲಿಲ್ಲವೆಂದು ತೋರುವದು. ಸಪ್ಪೆ ನೀಲಧ್ವಜನಿಗಿಂತ ಕಾರಜ್ವಾಲೆಯೇ ಎಂದಿಗೂ ಲೇಸಾದರೂ ಜ್ವಾಲೆಯದೇನು ಆದರ್ಶಪಾತ್ರವಲ್ಲ. ಕೊಲ್ಲಬೇಕು ಇಲ್ಲವೇ ಸಾಯಬೇಕು ಎಂಬೆರಡೆ ಕ್ಷಾತ್ರಮಂತ್ರಗಳು ಜಾಲೆಗೆ ತಿಳಿದಿದ್ದವು. ಬಲಾಬಲವನ್ನು ವಿಚಾರಮಾಡುವದೂ ರಾಜೋಪಾಯಗಳಲ್ಲಿ ಸೇರಿದೆ. ಆಪ್ತರಕ್ಷಕನಾದ ಅಗ್ನಿಯೇ 'ಸಂಗರಂ ಬೇಡ ನರನೊಡನೆ, ಸಾಕಾತನತುರಂಗಮಂ ಬಿಡು, ನಡೆ ನಗರಕೆ' ಎಂದು ಸಲಹೆಗೊಟ್ಟು ನೀಲಧ್ವಜನನ್ನು ಮನೆಗೆ ತಿರುಗಿಸಿದ್ದನು. ಮೂಲ ಅಗ್ನಿಗಿಂತ, ಕೇವಲ ಜ್ವಾಲೆಗೆ ಮಹತ್ವಕೊಡುವುದು ಔಚಿತ್ಯವೆನಿಸಿಕೊಳ್ಳಲಾರದು. ಜ್ವಾಲೆಯ ತಮ್ಮನಾದ ಉನ್ಮುಖನೇನು ಯುದ್ಧಪರಾಙ್ಮುಖ ಜೀವಿಯಲ್ಲ. 'ನಾಯಕರ್ಜುನನ ತಲೆ ಬಿದ್ದಪುದೆ ಕೃಷ್ಣನ ಸಹಾಯಮಿರಲೆಲೆಮರುಳೆ; ಹರಿಯ ಹಗೆಗೊಂಡು ಕೆಡುವಾಯಸಮಿದೇಕೆ?' ಎಂದ ಉನ್ಮುಖನ ಕೋಪದಲ್ಲಿ ಜೀವದ ಹೆದರಿಕೆ ಕಂಡು ಬರದೆ, ಜೀವನದ ವಿವೇಕವು ಕಂಡು ಬರುವದು.

ಜ್ವಾಲೆಯ ಗುಣವು ಅವಳ ಮಗಳಲ್ಲಿಯೂ ಕಂಡುಬರುವದು. ಜ್ವಾಲೆಯ ಮಗಳಾದ ಸ್ವಾಹಾ ಇವಳು ಅಗ್ನಿ ಉಪಾಸಕಳು. ಜ್ವಾಲೆಯ ತವರುಮನೆಯೂ ಅಗ್ನಿ ಉಪಾಸಕರದೆಂದು ತೋರುವದು. ಅವಳಂತೂ ಜ್ವಾಲೆಯು, ಅವಳ ತಮ್ಮನು ಉನ್ಮುಖ (ಊರ್ಧ್ವಮುಖನಾದ ಅಗ್ನಿ), ಸ್ವಾಹಾ ಇವಳಿಗೆ ಅಗ್ನಿಯು ದೈವತವಾಗಿ ಸಾಕಾಗಲಿಲ್ಲ. ಅವನು ತನಗೆ ಕಾಂತನಾಗಬೇಕೆಂಬಾಸೆಯಿತ್ತು. ಅವಳಿಗೆ ಇದು ಅಘಟಿತವಾದ ಆಸೆಯೆಂದು ತಂದೆಯಾದ ನೀಲಧ್ವಜನು ಹೇಳಿದರೆ ಪ್ರಾಯಕ್ಕೆ ಬಂದ ಈ ಮಗಳು 'ತಾತನಂ ಜರೆದು ಬೀಳ್ಕೊಂಡು' ಅಗ್ನಿಯನ್ನು ಒಲಿಸಿಕೊಳ್ಳುವ ವ್ರತವನ್ನು ಕೈಕೊಂಡಳು. ಅವಳತಾಯಿ ಜ್ವಾಲೆಯೇ ನಾರಿಯರ ಛಲದ ಜೀವಂತ ಜ್ವಾಲಾಮುಖಿಯಾಗಿದ್ದಳು! ಆಕೆಯ ಮಗಳು ಇವಳು.

ತಣ್ಣೀರಿನ ತಟಿನಿಯಾದ ಗಂಗೆಯನ್ನೂ ಕುದಿಸಿ ಶಾಪವೆಸರಿಗೆ ತಂದ ಜ್ವಾಲೆಯ ಸಂತಾಪವು ಸಾಮಾನ್ಯವಲ್ಲ. ಅಶ್ವಮೇಧದ ಸಂದರ್ಭದವರೆಗೂ ಗಂಗೆಗೆ ಭೀಷ್ಮನ ಮರಣದ ಸಂಗತಿಯೇ ತಿಳಿದಿದ್ದಿಲ್ಲ ಎಂಬುದು ಮಹಾಭಾರತದ ಕಥೆಗೆ ವಿಪರೀತವಾದ ಜೈಮಿನಿಯ ರಚನೆ. ಆದರೂ ಭೀಷ್ಮನ ಮರಣಕ್ಕೆ ಒಬ್ಬ ನಾರಿಯ ಛಲವೆ ಕಾರಣವಾಯಿತೆಂಬ ಮಹಾಭಾರತದ ಹೇಳಿಕೆಗೆ ಪ್ರತಿಯಾಗಿ, ಜೈಮಿನಿಯು ಭೀಷ್ಮರ ಮರಣದಿಂದಲೆ ಖತಿಗೊಂಡ ಗಂಗೆಯು ನಾರಿಯರಿಗೆ ಸಹಜವಾದ ವತ್ಸವಿರಹ ಸಂತಾಪದಲ್ಲಿ ಅರ್ಜುನನ ಮರಣಕ್ಕೆ ಕಾರಣಳಾಗುವಳು—ಎಂಬ ಕಥೆ ಸೃಷ್ಟಿಸಿದ್ದಾನೆ.

## ಪರಿಶಿಷ್ಟಗಳು.

### ಪದ್ಮ ಪುರಾಣದ ರಾಮಾಶ್ವಮೇಧಕ್ಕೂ ಜೈಮಿನಿ ಅಶ್ವಮೇಧಕ್ಕೂ ಇರುವ ಸಾದೃಶ್ಯಗಳು.

| | |
|---|---|
| ೧ ಆಗಸ್ತ್ಯನ ಉಪದೇಶ | ೧ ವ್ಯಾಸರ ಉಪದೇಶ |
| ೨ ನರಲೀಲೆಗಾಗಿ ಅವತಾರ | ೨ ಕೃಷ್ಣಲೀಲಾವತಾರ |
| ೩ ೬೮ ಅಧ್ಯಾಯ | ೩ ೬೮ ಅಧ್ಯಾಯ |
| ೪ ಅಶ್ವವು ದಿವ್ಯಪುರುಷನಾಗಿ ಹೋಗುವುದು, ಕಪ್ಪುರದ ಹೋಮ | ೪ ಹಾಲು ಸುರಿಯುವದು, ಅಶ್ವವು ಜ್ಯೋತಿಯಾಗಿ ಕೃಷ್ಣದೇಹದಲ್ಲಿ ಹೋಗುವುದು, ಕಪ್ಪುರದ ಹೋಮ |

| | |
|---|---|
| ೫ ಲವಕುಶರ ಯುದ್ಧ | ೫ ಬಭ್ರುವಾಹನ ಯುದ್ಧ |
| ೬ ಸುರಥನೇ ಗೆಲ್ಲುವನು, ರಾಮದರ್ಶನ | ೬ ಚಂದ್ರಹಾಸನೇ ಶ್ರೇಷ್ಟ ಕೃಷ್ಣ ದರ್ಶನ |
| ೭ಅ ವೀರವರ್ಮನ ಕಥೆಯಲ್ಲಿ ಶಿವನಿಗೆ ರಾಮನು "ನಿನ್ನ ಭಕ್ತರೇ ನನ್ನ ಭಕ್ತರು ನನ್ನ ಭಕ್ತರೇ ನಿನ್ನ ಭಕ್ತರು ನಮ್ಮಿಬ್ಬರಲ್ಲಿ ಭೇಧ ಮಾಡುವವರು ಕುಂಭೀಪಾಕ ನರಕಕ್ಕೆ ಹೋಗುವರು" | ೭ಅ ಸುರಥ-ಸುಧನ್ವ ಆಖ್ಯಾನದಲ್ಲಿ ಗರುಡ ನಂದಿಗಳ ಯುದ್ಧ |
| ಆ ಶತ್ರುಘ್ನ ಶಂಕರನೊಡನೆ ಯುದ್ಧ | ಆ ಹರಿಹರ ಭೇಧಮಾಡಬಾರದು |
| ಇ ಮಾರುತಿ ನಂದಿಗಳ ಯುದ್ಧ | |
| ೮ ಮಾರುತಿ ಸಂಜೀವನ ತರುವನು | ೮ ಬಭ್ರುವಾಹನ ಸಂಜೀವಕ ಮಣಿ ತರುವನು |
| ೯ ನರ್ಮದಾ ಹೃದಯದಲ್ಲಿ ಯೋಗಿಳಗ ಸ್ತ್ರೀರಾಜ್ಯ | ೯ ಪ್ರಮೀಲೆಯ ರಾಜ್ಯ |
| ೧೦ ಅರಣ್ಯಕ ಋಷಿಯ ತೇಜವು ರಾಮನ ದೇಹ ಸೇರುವದು | ೧೦ ಸುರಥ ಸುಧನ್ವರ ತೇಜ ಕೃಷ್ಣಮುಖ ಸೇರುವದು ಅಶ್ವದ್ದೂ ಹಾಗೆಯೇ |
| ೧೧ ವಿದ್ಯುನ್ಮಾಲಿ ರಾಕ್ಷಸ | ೧೧ ಭೀಷಣ, ಅನುಸಾಲ್ವ ರಾಕ್ಷಸರು |
| ೧೨ ತೇಜಃಪುರದ ಸತ್ಯವಾನ ರಾಮಭಕ್ತ, ಏಕಾದಶೀವ್ರತ, ತಾನೇ ರಾಮನಿಗೆ ಸೇರುವನು. | ೧೨ ಮಯೂರಧ್ವಜನ ರಾಜ್ಯ, ಏಕಾದಶೀವ್ರತ, ಚಂದ್ರಹಾಸ, ಮಯೂರಧ್ವಜರೂ ಹಾಗೆಯೆ ಕೃಷ್ಣ ಪಕ್ಷಕ್ಕೆ ಸೇರುವರು. |
| ೧೩ ಸುಭಾಹು ವಿಷ್ಣು ಭಕ್ತ. ಶಾಪವು ರಾಮನ ದರ್ಶನದಿಂದ ನಿವೃತ್ತಿ. (ಅ) ಕ್ರೌಂಚವ್ಯೂಹ | ೧೩ ವೀರವರ್ಮನವು ಇದೇ ರೀತಿಯಾಗಿದೆ. (ಅ) ತಾಮ್ರಧ್ವಜನಲ್ಲಿ ಗೃಧ್ರವ್ಯೂಹ |
| ೧೪ ನೀಲಪರ್ವತ ಪುರುಷೋತ್ತಮ ಕ್ಷೇತ್ರ | ೧೪ ಪಾರ್ವತಿ ಆಶ್ರಮ |
| ೧೫ ಅಶ್ವರಕ್ಷಣೆಗೆ ಶತ್ರುಘ್ನ, ಪುಷ್ಕಲ (ಭರತನ ಮಗ) ಲಕ್ಷ್ಮೀಧರ [ಸೀತೆಯ ತಮ್ಮ] | ೧೫ ಅಶ್ವರಕ್ಷಣೆಗೆ ಅರ್ಜುನ, ವೃಷಕೇತು (ಕರ್ಣನ ಮಗ) ಪ್ರದ್ಯುಮ್ನ, (ಸುಭದ್ರೆಯ ತಮ್ಮನ ಮಗ) |
| ೧೬ ಅಸಿಧಾರಾವ್ರತ | ೧೬ ಅಧಾರಾವ್ರತ |
| ೧೭ ೬೪ ರಾಜರಿಂದ ಅಭಿಷೇಕವು 'ರಾಮಾಶ್ವಮೇಧ' ೨ ದಲ್ಲಿ | ೧೭ ಅದೇ ಪ್ರಕಾರ ಜೈಮಿನಿ ಅಶ್ವಮೇಧದಲ್ಲಿ |

| | |
|---|---|
| ೧೮ ತಿಥಿವಾರ ಪ್ರಕಾರವಾಗಿ ಸಂಗತಿ ಕೊಡುವದು | ೧೮ ಇದರಲ್ಲಿಯೂ ಅದೇ ಪ್ರಕಾರ ತಿಥಿವಾರಗಳ ಪಟ್ಟ |
| ೧೯ ೪೩೨೫ ಶ್ಲೋಕಗಳು | ೧೯ ೫೧೯೪ ಶ್ಲೋಕಗಳು |
| ೨೦ ಆರಣ್ಯಕ ಮುನಿಯು ಹರಿರಘುನಾಥನ ಉಪಾಸನೆ ಬಿಟ್ಟು, ನಶ್ವರ ಫಲ ಕೊಡುವ ಯಾಗಗಳೇಕೆ? ಎನ್ನುವರು. | ೨೦ ಸೌಭರಿ, ಬಕದಾಲ್ಭ್ಯರು ಇದೇ ರೀತಿಯ ಪ್ರಶ್ನೆ ಮಾಡುವರು |
| ೨೧ ರಾಮಾಶ್ವಮೇಧದಲ್ಲಿ ಸುರಥನೆಂಬ ಒಬ್ಬರಾಜ (ಸುರಥ ಸುಧನ್ವನಲ್ಲ) | ೨೧ ಮೂಲ ಜೈಮಿನಿಯಲ್ಲಿ ಸುರಥನ ಈ ಮಾತು ಬರುವದು [ಅ ೫, ಶ್ಲೋಕ ೭೯]. ಇದು ವಾಲ್ಮೀಕಿಯಲ್ಲು |
| ೨೨ ಕಲಹೆಯ ಕಥೆ (ಉ. ಖ. ೧೦೭ ೧೦೭) | ೨೨ ಚಂಡಿಯ ಕಥೆ |
| ೨೩ ಯೌವನಾಶ್ವ, ಒಬ್ಬ ನೀಲಧ್ವಜ ಒಬ್ಬ ಭೀಷಣನೆಂಬ ರಾಕ್ಷಸ (ಪ. ಉ. ೨೦೭) ಒಬ್ಬ ವೀರವರ್ಮ (ಪ. ಉ. ೨೨೦) | ೨೩ ಈ ಹೆಸರಿನ ಅರಸರು ಇಲ್ಲಿಯೂ ಬರುವರು |

ಪದ್ಮಪುರಾಣಾಂತರ್ಗತವಾದ ರಾಮಾಶ್ವಮೇಧದ ಕಥೆಯು ಕನ್ನಡದಲ್ಲಿ ಎರಡು ಕೃತಿಗಳ ರೂಪದಲ್ಲಿ ಅವತಾರಗೊಂಡಿದೆ. (೧) ಮುದ್ದಣ್ಣನ ರಾಮಾಶ್ವಮೇಧ (೨) ದಿ. ಅಯ್ಯಾ ಶಾಸ್ತ್ರಿಗಳ ಶೇಷ ರಾಮಾಯಣ. ಒಂದು ವಚನಕಾವ್ಯ. ಇನೊಂದು ವಾರ್ಧಿಕ ಷಟ್ಪದಿಯಲ್ಲಿ ಬರೆದದು. ಕುತೂಹಲವುಳ್ಳವರು ಇವುಗಳನ್ನು ಕನ್ನಡ ಜೈಮಿನಿಯೊಡನೆ ಹೋಲಿಕೆಗಾಗಿ ನೋಡಬೇಕು.

## ಮಹಾಭಾರತದ ಅಶ್ವಮೇಧ.

೧ ಯುಧಿಷ್ಠಿರನಿಗೆ ವ್ಯಾಸರೇ ಯಜ್ಞದ ಉಪದೇಶ ಮಾಡುವರು.

೨ ಕ್ಷತ್ರಿಯನು ಯುದ್ಧದಲ್ಲಿ ಜ್ಞಾತಿವಧೆ ಮಾಡುವದು ತಪ್ಪಲ್ಲ ಎಂದು ವ್ಯಾಸರು ಉಪದೇಶಿಸುವರು.

೩ ರಾಮಚಂದ್ರ ಭರತನು ಅಶ್ವಮೇಧ ಮಾಡಿದರು.

೪ ಪೃಥ್ವಿ ದಕ್ಷಿಣೆ ಮಾಡಬೇಕು. ದುರ್ಯೋಧನ ಪೀಡಿತ ಜನರಿಂದ ಹಣ ತರುವ ಮನಸ್ಸಿಲ್ಲ ತನಗೆ ಎಂದು ಧರ್ಮನೆನ್ನುವನು.

೫ ಮರುತ್ತನ ಯಜ್ಞದ ಧನ ತರುವದು, ಆಖ್ಯಾನ ದೊಡ್ಡದಿದೆ.
೬ ಶಿವ–ರುದ್ರರ ಬಗ್ಗೆ ಸಮಾನ ಆದರವಿದೆ.
೭ ವಿಧಿಯುಕ್ತವಾದ ಬಹುದಕ್ಷಿಣೆಯ ಅಶ್ವಮೇಧ ಮಾಡು. ಆದರಿಂದ ನಿರ್ಮ ಮತ್ವವುಂಟಾಗುವದೆಂದು ಕೃಷ್ಣ ಹೇಳುವನು.
೮ ೧೬ನೆಯ ಅಧ್ಯಾಯಕ್ಕೆ 'ಅನುಗೀತಾ' ಪರ್ವವಿದೆ.
೯ ೭೧ನೇಯ ಅಧ್ಯಾಯವದಲ್ಲಿ ಕಷ್ಣ ವೇದವ್ಯಾಸರಿಬ್ಬರೂ ಅಶ್ವಮೇಧಕ್ಕೆ ಒಪ್ಪಿಗೆ ಕೊಡುವರು.
೧೦ ಧನವನ್ನು ಮರುತ್ತನಲ್ಲಿಂದ ತಂದಿದ್ದಾರೆ.
೧೧ ವ್ಯಾಸ, ಪೈಲ, ಯಾಜ್ಞವಲ್ಕ್ಯರು ಅಧ್ವರ್ಯುಗಳು.
೧೨ ಚೈತ್ರ ಪೌರ್ಣಿಮೆಯ ದಿನ ಯಜ್ಞದೀಕ್ಷೆಯಾಗುವದು.
೧೩ ಅನೇಕ ದೇಶ ತಿರಿಸಿಕೊಂಡು ಕುದುರೆ ತ್ರಿಗರ್ತಕ್ಕೆ ಬರುವದು. ಆಗ ಅಲ್ಲಿ ಸೂರ್ಯವರ್ಮ ರಾಜನಾಳುತ್ತಿದ್ದನು.
೧೪ ಪ್ರಾಗ್‌ಜ್ಯೋತಿಷದ ಭಗದತ್ತ ಪುತ್ರನಾದ ವಜ್ರದತ್ತ.
೧೫ ಸೈಂಧವರು, ದುಃಶೀಲೆಯ ಮಗ ಸಾಯಲು ಮೊಮ್ಮಗನೊಡನೆ ಅವಳು ಶರಣು ಬರುವಳು. ಜಯದ್ರಥ-ಸುರಥ-ಮೊಮ್ಮಗ.
೧೬ ಮಣಿಪುರದ ಕಥೆ. ಅರ್ಜುನನು ಬಭ್ರುವಾಹನನು ತನ್ನ ಮಗನೆಂದು ತಿಳಿದೂ ಕ್ಷಾತ್ರಧರ್ಮವಾಚರಿಸಲಿಲ್ಲೆಂದು ಸಿಟ್ಟಾಗುವನು. ಉಲೂಪಿಯು ಬಭ್ರುವಾಹನ ನಿಗೆ ಕ್ಷಾತ್ರಧರ್ಮದಂತೆ ಯುದ್ಧ ಮಾಡಲು ಹೇಳುವಳು. ಅರ್ಜುನನು ಬಭ್ರುವಾಹನನ ಬಾಣದಿಂದ ಮೃತಪ್ರಾಯನಾಗುವನು. ಬಭ್ರುವಾಹನನೂ ಮೂರ್ಛಿತನಾಗುವನು. ಚಿತ್ರಾಂಗದೆ ವಿಲಾಪಮಾಡುವಳು. ಅವಳು ಸತಿ ಹೋಗಲು ಸಿದ್ಧಳಾಗುವಳು. ಎಚ್ಚತ್ತು ಬಭ್ರುವಾಹನನು ಸಾಯಲು (ಪ್ರಾಯೋಪವೇಶನ( ಸಿದ್ಧನಾಗುವನು. ಉಲೂಪಿಯು ಚಿಂತನ ಮಾತ್ರದಿಂದ ತಾತ್ಕಾಲ ಸಂಜೀವಕ ಮಣಿ ಪಡೆದು ಅರ್ಜುನನ್ನು ಎಬ್ಬಿಸುವಳು. 'ಅರ್ಜು ನನು ನಿಜವಾಗಿ ಸತ್ತಿಲ್ಲ. ಮೋಹಿಸಿ ಮಾಯೆಯಿಂದ ಹಾಗೆ ಮಾಡಿದ್ದಾಗಿದೆ, ಭೀಷ್ಮನ ಸಾವಿಗಾಗಿ ವಸುಗಳು ಗಂಗೆಯ ಸಮ್ಮತಿಯಿಂದ ಅರ್ಜುನನಿಗೆ ಶಾಪ ಕೊಟ್ಟಿದ್ದರು. ಅದಕ್ಕಾಗಿ ಪುತ್ರನಿಂದ ಸಾವು ಅರ್ಜುನನಿಗಾಯಿತು.
೧೭ ಮಾಗಧ ಸಹದೇವನ ಮಗ ಮೇಘಸಂಧಿ. ಜರಾಸಂಧ-ಸಹದೇವ-ಮೇಘಸಂಧಿ.
೧೮ ದಕ್ಷಿಣಕ್ಕೆ ಚೇದಿ ರಾಜ್ಯದಲ್ಲಿ ಶುಕ್ತಿ ಸಾಮ್ವಕದಲ್ಲಿ ಶಿಶುಪಾಲನ ಮಗ ಶರಭ.
೧೯ ಕಾಶಿ, ಕೋಶಲ, ಕಿರಾತ, ತಂಗಣ, ದಶಾರ್ಣದಲ್ಲಿ ಚಿತ್ರಾಂಗದ.

೨೦ ನಿಷಾದ ರಾಜ್ಯದಲ್ಲಿ ಏಕಲವ್ಯ ಪುತ್ರ.

೨೧ ದ್ರಾವಿಡ, ಆಂಧ್ರ, ಮದ್ರ ಮಾಹಿಷಕ, ಕೊಲ್ಲ, ಪರ್ವತವಾಸಿ, ಸುರಾಷ್ಟ್ರ, ಗೋಕರ್ಣ, ಪ್ರಭಾಸ, ದ್ವಾರಾವತಿ, ಪಶ್ಚಿಮ ಸಮುದ್ರ, ಪಂಚನದ ಮೊದಲಾದ ದೇಶಗಳಲ್ಲಿ ಕುದುರೆ ಹಾಯ್ದು ಬರುವದು.

೨೨ ಗಾಂಧಾರದಲ್ಲಿ ಶಕುನಿಪುತ್ರ. ವರ್ಷ ಮುಗಿಯಿತು.

೨೩ ಮಾಘ ಶುದ್ಧ ದ್ವಾದಶಿಗೆ ತಮ್ಮಂದಿರ ಬೆಟ್ಟ. ಮಾಘ ಶುದ್ಧ ಪೌರ್ಣಿಮೆಗೆ ಯಜ್ಞಾರಂಭ.

೨೪ ಯಜ್ಞದಲ್ಲಿ ಬ್ರಾಹ್ಮಣರ ವಾದ; ಅನೇಕ ಪಶುಪಕ್ಷಿಗಳ ಪಕ್ವಾನ್ನಗಳ ಯಜ್ಞ.

೨೫ ಅರ್ಜುನನ ಸಂದೇಶ. ಕೃಷ್ಣ ಹೇಳುತ್ತಾನೆ:— 'ರಾಜಸೂಯದೊಳಗಿನಂತೆ ಮಾಡಬೇಡಿರಿ. ಬಂದ ರಾಜರ ಪೂಜೆಮಾಡಿರಿ. ಬಭ್ರುವಾಹನನಿಗೂ ಕೂಡ ಆದರ ನಡೆಯಿತು.

೨೬ ಧರ್ಮನ ಅಶ್ವಮೇಧಕ್ಕೆ **"ಬಹು ಸುವರ್ಣಕ"** ವೆಂದು ಹೆಸರಾಯಿತು ಈ ಯಜ್ಞದಲ್ಲಿ. ಮೂರುಪಟ್ಟು ದಕ್ಷಿಣೆ ಕೊಡಲಾಯಿತು ಈ ಯಜ್ಞದಲ್ಲಿ.

೨೭ ಎತ್ತು ಜಲಚರ ಪ್ರಾಣಿಗಳು ಬಲಿಗಾಗಿ ತರಲ್ಪಟ್ಟಿದ್ದವು.

೨೮ ಅಶ್ವರತ್ನವಲ್ಲದೆ ೩೦೦ ಬೇರೆ ಪಶುಗಳು ಯಜ್ಞಕ್ಕಾಗಿ ಆಹುತಿಯಾಗುವವು.

೨೯ ನಾರದ, ತುಂಬರು, ವಿಶ್ವಾವಸು, ಚಿತ್ರಸೇನರು ಬಂದಿದ್ದರು.

೩೦ ವಪೆಯ ಹವನವಾಯಿತು. ಹೃದಯಾದಿಗಳನ್ನು ಬೇರೆ ಋತ್ವಿಕ್ಕುಗಳು ಹವನ ಮಾಡಿದರು.

೩೧ ರಾಜಮಹಿಷಿಯು ಅಶ್ವದೊಡನೆ **ಸ್ವಪನ**ಮಾಡುವ ವಿಧಿ ಇದರಲ್ಲಿಲ್ಲ.

೩೨ ವ್ಯಾಸರಿಗೆ ಪೃಥ್ವಿಯನ್ನೆ ದಕ್ಷಿಣೆಯಾಗಿ ಧರ್ಮರಾಜನು ಕೊಡುವನು. ಅದಕ್ಕೆ ಅವರು ಪೃಥ್ವಿಯನ್ನು ಮರಳಿ ಕೊಟ್ಟು ದಕ್ಷಿಣೆ ಬೇಡುವರು. ಆ ದಕ್ಷಿಣೆಯನ್ನು ಅವರು ಕುಂತಿಗೆ ಮಾವನ ಹಣವೆಂದು ಕೊಡುವರು.

೩೩ ಬ್ರಹ್ಮಸ್ವ ಸ್ವೀಕಾರಮಾಡಲಾರೆವೆಂದು ಇಲ್ಲಿ ಧರ್ಮಾದಿಗಳು ಹೇಳುವರು.

೩೪ ಯಜ್ಞದೊಳಗಿನ ಧನವನ್ನು ನಾಲ್ಕು ವರ್ಣದವರೂ, ಆ ಮೇಲೆ ಮ್ಲೇಂಛರೂ ಕೂಡಲೂಟಮಾಡಿದರು.

೩೫ **ನಕುಲಾಖ್ಯಾನವಿದೆ.**

೩೬ ಉಂಛ ವೃತ್ತಿಯ ಬ್ರಾಹ್ಮಣ ಕುಟುಂಬದ ಕಥೆ ಇದೆ.

೩೭ ಅಗಸ್ತ್ಯನ **ಅಹಿಂಸಾಮಯ** ಯಜ್ಞ.

೩೮ ನಕುಲವು ಶಾಪನಿವೃತ್ತವಾಗಿ ಮುಕ್ತವಾಗಿ ಹೋಗುವದು. ಇದು **ಕುದುರೆಯ ಕಥೆಗೆ** ಸಮಾನವಿದ್ದಂತಿದೆ.

# ಪ್ರಾಚೀನ ಅಶ್ವಮೇಧದ ವಿಧಾನ

ತೈತ್ತಿರೀಯ ಬ್ರಾಹ್ಮಣದಲ್ಲಿ ಬರುವ ಅಶ್ವಮೇಧದ ವಿವರಗಳಿಗೂ ಜೈಮಿನಿ ಅಶ್ವಮೇಧದೊಳಗಿನ ವಿವರಗಳಿಗೂ ಬಹಳೇ ಬಿಡುವದು. ಜೈ. ಅ. ದ. ಅರ್ವಾಚೀನ ಸ್ವರೂಪವು ಸ್ಫುಟಕವಾಗಲೆಂದು ಪ್ರಾಚೀನ ಅಶ್ವಮೇಧದ ಈ ವರ್ಣನೆಯನ್ನು ನೋಡಬಹುದು. "ಇದೊಂದು ಸೋಮಯಜ್ಞವೇ. ಸಾರ್ವಭೌಮರಾದ ಚಕ್ರವರ್ತಿಗಳೇ ಇದನ್ನು ಮಾಡಲು ಅಧಿಕಾರಗಳು. ಇದಕ್ಕೆ 'ಶ್ಯಾಮಕರ್ಣ' ಕುದುರೆ ಬೇಕು. ಒಂದು ವರ್ಷದಲ್ಲಿ ನಾಲ್ಕುದಿಕ್ಕು ಅಡ್ಡಾಡಿ ಬರುವದೇ ಇದರ ಮಿತಿ. ಎಲ್ಲ ರಾಜರನ್ನು ಸೋಲಿಸಿ ಬಂದದ್ದಾದರೆ ಆ ಕುದುರೆಯ ಅವಯುವದ ಯೂಗವನ್ನು ಮಾಡುವದೇ ಇವರ ಲಕ್ಷಣ. ಪೂರ್ವದಿಕ್ಕಿಗೆ ೧೦೦ ರಾಜಪುತ್ರರೊಡನೆ ಅಧ್ವರ್ಯುವು, ದಕ್ಷಿಣದಿಕ್ಕಿಗೆ ೧೦೦ ಶೂರ ಕ್ಷತ್ರಿಯರೊಡನೆ "ಬ್ರಹ್ಮಾ" ಇವನು, ಪಶ್ಚಿಮದಿಕ್ಕಿಗೆ ೧೦೦ ಸಾರಥಿ ಗ್ರಾಮಣಿ ಮೊದಲಾದವರೊಡನೆ 'ಹೋತಾ'ರನು, ಉತ್ತರಕ್ಕೆ ೧೦೦ ಅರಸನೂಳಿಗದವಗು ಹಾಗು (ವೈಶ್ಯ ಶೂದ್ರ ಸಂಕರ ಜಾತಿಯಾದ) ಕ್ಷತ್ತಾರರೊಡನೆ' ಉದ್ಗಾತ'ನು ಹೀಗೆ ನಾಲ್ವರು ಋತ್ವಿಜರು ಕುದುರೆಗೆ ಪ್ರೋಕ್ಷಣ ಮಾಡುವರು. ಕುದುರೆಯೊಡನೆ ಒಂದು ನಾಯಿಯನ್ನೂ ನೀರಲ್ಲಿ ಬಿಟ್ಟು, ಅದನ್ನು ಒನಿಕೆಯಿಂದ ಬಡಿದು ಕೊಲ್ಲುವರು. ಈ ಮೆಧದಲ್ಲಿ ಪಶುಗಳನ್ನು ಕಟ್ಟಲು ೬ ಬೆಲಪತ್ರಿ, ೬ ಖದಿರ, ೬ ಪಲಾಶ, ೪-೨೩? ದೇವದಾರು, ೧ ಕೆಂಪುಮತ್ತಿ ರಗತರೋ(ಡಾ) ಹೀಗೆ ೨೧-೨೩? ಕಂಬಗಳನ್ನು ಯೂಪಗಳಾಗಿ ಹೂಡುವರು. ಒಂದೋಂದು ಕಂಬಕ್ಕೆ ಒಂಜೋಬತ್ತು ಅಂತೂ ೨೦ಕ್ಕೆ ೧೮೦ ಪಶುಗಳನ್ನು ಕಟ್ಟುವರು ಹಾಗೂ ಯಜ್ಞದಲ್ಲಿ ಕೊಲ್ಲುವರು. ಇವಲ್ಲದೆ ಮುಖ್ಯಯೂಪಗಳು 'ಚಾತುರ್ಮಾಸ್ಯ' 'ಏಕಾದಶಿನ್' 'ದಶಿನ್' ಆದಿ ಸಂಜ್ಞೆಗಳಿಂದ ದರ್ಶಿತವಾಗುವವು ಅನೇಕ ಪಶುಗಳನ್ನು ಕೊಲ್ಲುವರು. ಕೊಲ್ಲಲಾಗುವ ಪಶುಗಳಲ್ಲಿ ಗ್ರಾಮ್ಯಗಳೆಂದು ಆರಣ್ಯಕಗಳೆಂದು ಎರಡು ಭಾಗ. ಆರಣ್ಯಕಗಳನ್ನು ಕೆಲವೊಂದು ಸಂಸ್ಕಾರ ಮಾಡಿ ಬಿಟ್ಟುಬಿಡುವರು. ಯಜಮಾನ ಪತ್ನಿಗೂ, ಮೃತ ಅಶ್ವಕ್ಕೂ ಮೈಥುನವು ಈ ಯಜ್ಞದಲ್ಲಿ ವಿಹಿತವಾಗಿದೆ. ಋತ್ವಿಜರಲ್ಲಿ ಪ್ರಶ್ನೋತ್ತರಗಳು ಆಗುವವು. ಶ್ಯಾಮಕರ್ಣವನ್ನು ಹವನ ಮಾಡುವ ಮೊದಲು ಯಜ್ಞ ಭೂಮಿಯ ಸುತ್ತಲು ರಥಕ್ಕೆ ಹೂಡಿ ಪ್ರದಕ್ಷಿಣೆ ಮಾಡಿಸುವರು. ರಥಕ್ಕೆ ಒಂದು ವಿಜಯಧ್ವಜವಿರುವದು.

ರಾಜನ ಅನೇಕ ರಾಣಿಯರು ಕುದುರೆಗೆ ಸೂಜಿಗಳಿಂದ ಚುಚ್ಚಿ ಗುರುತು ಮಾಡುವರು. ಕೆಂಪುಮತ್ತಿಯ ಯೂಪಕ್ಕೆ ಹವನೀಯಾಶ್ವಯವನ್ನು ಕಟ್ಟುವರು. ಗಾನ

ಕುಶಲರಾದ ಬ್ರಾಹ್ಮಣರ ಹಾಗೂ ಕ್ಷತ್ರಿಯರ ವೀಣಾವಾದನ ಹಾಗು ಗಾಯನವಾಗುವದು. ಬ್ರಾಹ್ಮಣರಿಗೆ ಹಗಲು ಕ್ಷತ್ರಿಯರಿಗೆ ರಾತ್ರಿ ಕೊಡಲಾಗಿರುವದು. ಕುದುರೆ ಕೊಲ್ಲಲು ಒಯ್ಯುವಾಗ ಒಂದು ಹೆಣ್ಣು ಕುದುರೆಯನ್ನು ಅದರ ಮುಂದೆ ನಡೆಯಿಸಲಾಗುವದು. ಗಿಡದ ರೆಂಬೆಗಳ ಮೇಲಿಟ್ಟು ತುಪ್ಪದಲ್ಲಿ ತೋಯಿಸಿದ ಉಣ್ಣೆಯ ವಸ್ತ್ರವನ್ನೂ ಯಜ್ಞದಲ್ಲಿ ಹೊತ್ತುಕೊಳ್ಳಲು ಉಪಯೋಗಿಸುವ ತೊಗಲನ್ನೂ ಕೆಳಗೆ ಹಾಸಿ ಅದರ ಸುವರ್ಣಖಚಿತವಾದ ಶಯ್ಯೆಯ ಮೇಲೆ ಬೆಳ್ಳಿಯ ತಗಡಿನ ಮೇಲೆ ಕುದುರೆಯನ್ನು ಅಡ್ಡಕೆಡವಿ ಹನನ ಕರ್ಮವನ್ನು ಮುಗಿಸುವರು. ಕುದುರೆಯೊಡನೆ ಒಂದು ಆಕಳನ್ನೂ ಕೊಲ್ಲುವರು.

— ಮಹಾರಾಷ್ಟ್ರ ಜ್ಞಾನಕೋಶ ಪ್ರಸ್ತಾವನಖಂಡ, ವೇದಪ್ರವೇಶ
ಪುಟ ೭೮—೭೯

---

## ಅಶ್ವಮೇಧದ ಉತ್ಕ್ರಾಂತಿ

ಅಶ್ವಮೇಧದ ವಿಚಾರವು ಅತಿ ಪ್ರಾಚೀನವಾದ ಗ್ರಂಥಗಳಲ್ಲಿಯೂ ಕಂಡು ಬರುವದು. ಋಗ್ವೇದದ ಒಂದನೆಯ ಮಂಡಲ ೧೬೨—೧೬೩ ನೆಯ ಸೂಕ್ತದಲ್ಲಿ ಅಶ್ವಮೇಧ ಕುದುರೆಯ ವರ್ಣನೆ ಬಂದಿದೆ. ಋಗ್ವೇದ ೧೦ ನೆಯ ಮಂಡಲದಲ್ಲಿ ೧೫೬ ನೆಯ ಸೂಕ್ತದ ಮೊದಲ ಮೂರು ಋಚೆಗಳನ್ನು ಅಶ್ವಮೇಧದಲ್ಲಿ ಹೇಳಬೇಕಾಗುವದು. ಯಜುರ್ವೇದದ ಅನೇಕ ಸೂಕ್ತಗಳು ಅಶ್ವಮೇಧದ ವಿಷಯವನ್ನೆತ್ತುವವು. ತೈತ್ತಿರೀಯ ಸಂಹಿತೆ ಮತ್ತು ಐತರೇಯ ಬ್ರಾಹ್ಮಣಗಳಲ್ಲಿ ಈ ಮೇಧವು ವರ್ಣಿತವಾಗಿದೆ. ಸಾರ್ವಭೌಮರಾದವರೂ— ಅಲ್ಲದವರೂ ಈ ಮೇಧವನ್ನು ಮಾಡಿದ್ದಾರೆ. ಅಶ್ವಮೇಧವನ್ನು ಕುರಿತು ತೈತ್ತರೀಯ ಸಂಹಿತೆಯಲ್ಲಿ ಈ ಕಥೆ ಇದೆ:— ಪ್ರಜಾಪತಿಯ ಕಣ್ಣು ಒಮ್ಮೆ ಕಳಚಿ ಬಿದ್ದಿತು. ಆದರಿಂದ ಅಶ್ವಜಾತಿಯ ಉತ್ಪತ್ತಿಯಾಯಿತು. ದೇವತೆಗಳು ಅಶ್ವಮೇಧಮಾಡಿ ಆ ಗುಡ್ಡೆಯನ್ನು ಮತ್ತೆ ಪಡೆದರು. ಇದ್ದರಿಂದ ಯಾರಾರು ಅಶ್ವಮೇಧವನ್ನು ಮಾಡುವರೋ ಅವರು ಪ್ರಜಾಪತಿಯನ್ನು ಸಂತುಷ್ಟಗೊಳಿಸುವರು. ಈ ಮೇಧದಿಂದ ಬ್ರಹ್ಮಹತ್ಯಾ ಪಾಪವು ನಾಶವಾಗುವದು. ( ೫. ४. ೧೨. )

ಸತ್ಯಾಷಢ ಸೂತ್ರಗಳಲ್ಲಿ ಅಶ್ವಮೇಧವನ್ನು ಕುರಿತು ಇರುವ ಕೆಲ ಮಾತುಗಳು ಹೀಗಿವೆ:- ಯಜ್ಞ ಮಾಡತಕ್ಕವನು ಚೈತ್ರಪೌರ್ಣಿಮೆಗೆ ಸಾಂಗ್ರಹಿಣಿ ಇಷ್ಟಿಯನ್ನು ಮಾಡಬೇಕು. ವೈಶಾಖ ಪೌರ್ಣಿಮೆಗೆ ಪ್ರಜಾಪತಿಯನ್ನು ಕುರಿತು ಪಶುಯಜ್ಞವನ್ನು ಮಾಡಬೇಕು. ಮೂರನೆಯ ದಿವಸ ಋತ್ವಿಜರ ಆಯ್ಕೆ ನಿಶ್ಚಯವಾಯವಾಗಿ ಯಜ್ಞದ ಸಂಕಲ್ಪ ಮಾಡಿ ಕುದುರೆಯನ್ನು ಕಾವಲಿನವರೊಡನೆ ಬಿಡಬೇಕು. ಅಂದಿನಿಂದ ದಿನಾಲು ಮುಂಜಾವ, ಮಧ್ಯಾಹ್ನ, ಸಂಜೆಗೆ ಸರಸ್ವತಿ ಇಷ್ಟಿಯನ್ನು ಮಾಡಬೇಕು. "ಪಾರಿಪ್ಲವ" ಆಖ್ಯಾನವನ್ನು ಕೇಳಬೇಕು. ಒಂದು ವರ್ಷದ ಕೊನೆಗೆ ಕುದುರೆ ಬಂದಿತೆಂದರೆ ಯಜಮಾನನು ಯಜ್ಞದೀಕ್ಷೆ ವಹಿಸುತ್ತಾನೆ. ಈ ಮೇಧದ ಅಂಗವಾಗಿ "ಶ್ರುತ್ಯಾಹ" ವೆಂಬ ಸೋಮಯಾಗವನ್ನು ಮೂರು ದಿವಸ ಮಾಡುವರು. "ಗ್ರಾಮ್ಯ" ಮತ್ತು "ಆರಣ್ಯ" ಪಶುಗಳ "ಉಪಾಕರಣ" ವಾಗುವದು. ಗ್ರಾಮ್ಯ ಪಶುಗಳನ್ನು ಆಹುತಿಗೊಟ್ಟು ಅರಣ್ಯಕಗಳನ್ನು ಬಿಟ್ಟುಕೊಡುವರು. ಅಶ್ವದ ಉಪಕರಣವು ಸೋಮಯಾಗದ ಎರಡನೆಯ ದಿವಸವಾಗುವದು. ಕದುರೆಯನ್ನು ಶೃಂಗರಿಸಿ ಯಜ್ಞಮಂಟಪದ ಸುತ್ತು ತಿರುಗಿಸುವರು. ಆ ಮೇಲೆ ಉತ್ತರವೇದಿಯ ಉತ್ತರ ದಿಕ್ಕಿಗೆ "ಆಸ್ತಾವ"ದಲ್ಲಿ ನಿಲ್ಲಿಸುವರು. ಆಗ ಅದು ಆ ನೆಲವನ್ನು ಮೂಸಿನೋಡಿದರೆ ಶುಭವೆಂದು ತಿಳಿಯುವದುಂಟು. ಅಶ್ವದ "ಸಜ್ಞಪನ" ಅಶ್ವದೊಡನೆ ಯಜಮಾನ ಪತ್ನಿಯ "ಉಪವೇಶನ," ಋತ್ವಿಕುಗಳಲ್ಲಿ ಪ್ರಶ್ನೋತ್ತರ, ಇವೆಲ್ಲ ವಿಧಿಗಳು ಯಥಾಕ್ರಮವಾಗಿ ಆಗುವವು. ಅಶ್ವಕ್ಕೆ "ವಪೆ" ಇಲ್ಲದ್ದರಿಂದ ಚಂದ್ರನೆಂಬ ಆದರ ಮೇಧಸ್ಸಿನ ಯಾಗಮಾಡುವರು. ಯಜಮಾನನಿಗೆ ಕೊನೆಗೆ ಅಭಿಷೇಕವಾಗುವದು.

ಮಹಾಭಾರತದಲ್ಲಿ ಬರುವ ಅಶ್ವಮೇಧದ ಮುಖ್ಯ ಲಕ್ಷಣಗಳು ಸ್ವಲ್ಪ ಬೇರೆಯಾಗಿವೆ. ಚೈತ್ರಪೌರ್ಣಿಮೆಗೆ ಅರ್ಜುನನು ಅಶ್ವದೊಂದಿಗೆ ತಿರುಗಿ ಬರುವನು. ಯಜ್ಞ ಮಂಟಪದಲ್ಲಿ "ಸದ" "ಅಗ್ನಿಧ್ರೀಯಾ" "ಪತ್ನಿಶಾಲಾ," ಎಂಬ ಭಾಗಗಳಿರುವವು, "ಕಾಷಾಯ" ಎಂಬ ಉಪಕರಣ, ಸುವರ್ಣದ ಪ್ರವರ್ಗ ಮತ್ತು ಸೋಮಾಭಿಷವದ ಉಲ್ಲೇಖವು ಇಲ್ಲಿದೆ. ಶೃಂಗಾರಕ್ಕಾಗಿ ಭಂಗಾರದ ಅಸಂಖ್ಯಯೂಪಗಳನ್ನು ಹುಗಿಯುತ್ತಿದ್ದರೆಂದು ತೋರುವದು. ಅಶ್ವದೊಡನೆ ಪಶುಗಳ "ಉಪಕರಣ" "ಶ್ಯೇನಚಿತಿ" ಸುವರ್ಣದ ಇಟ್ಟಗೆ ಮೃತಅಶ್ವದೊಂದಿಗೆ ಯಜಮಾನ ಪತ್ನಿಯ ಶಯನ ಅಶ್ವವಪೆಯ ಹವನ, ಅಶ್ವಮಾಂಸವನ್ನು ೧೬ ಋತ್ವಿಕ್ಕುಗಳು ಹವನ ಮಾಡುವದು ಇವೇ ಮೊದಲಾದ ಮಾತುಗಳಲ್ಲಿ ಸೂತ್ರೋಕ್ತ ಅಶ್ವಮೇಧಕ್ಕೂ, ಮಹಾಭಾರತ

ರಚನಾಕಾಲದ ಅಶ್ವಮೇಧದ ಕಲ್ಪನೆಗೂ ಅಂತರವುಂಟಾಗಿತ್ತೆಂದು ಮೇಲೆಯೇ ಕಾಣುವಂತಿದೆ.

ಮೂಲ ರಾಮಾಯಣದಲ್ಲಿ ಅಶ್ವಮೇಧವಿಲ್ಲ. ಅದರ ಉತ್ತರ ಖಂಡವು ಆಮೇಲೆ ಸೇರಿದ ಭಾಗ. ಅಂತೆಯೆ ಇಲ್ಲಿಯ ಅಶ್ವಮೇಧ ಸತ್ರವು, ಮಹಾಭಾರತಗಳಲ್ಲಿ ಉಲ್ಲಿಖಿತವಾದ ಲಕ್ಷಣಗಳಿಗಿಂತ ಭಿನ್ನ ಲಕ್ಷಣವುಳ್ಳದ್ದಾಗಿದೆ. ಈ ಅಶ್ವಮೇಧದಲ್ಲಿ ಮೊದಲು ದಿನ "ಜ್ಯೋತಿಷ್ಟೋಮ," ಎರಡನೆಯ ದಿನ "ಉಖ್ತ" ಮೂರನೆಯ ದಿನ "ಅಧಿರಾತ್ರ" ಈ ಕೃತುಗಳ ಅನುಷ್ಠಾನವಾಗುವದು. ರಾಜಮಹಿಷಿಯು ಮೃತ ಅಶ್ವದೊಂದಿಗೆ ಶಯನ ಮಾಡುವದು, ರಾಜಮಹಿಷಿಯನ್ನು ಸೂತ್ರೋಕ್ತ ಹೆಸರಿನಿಂದ ಕರೆಯುವದು ಇವೇ ಮೊದಲಾದ ಪ್ರಾಚೀನ ಲಕ್ಷಣಗಳೂ ಇಲ್ಲಿವೆ.

ಮೂಲ ರಾಮಾಯಣದಲ್ಲಿ ರಾಮನು ರಾಜಸೂಯ ಮಾಡಬೇಕೆಂದರೆ ಅದರಿಂದ ಕ್ಷತ್ರಿಯ ರಾಜರ ನಾಶವಾಗುವದು; ಆದಕಾರಣ ಅದು ಬೇಡ ಎಂದು ಭರತನು ಹೇಳಿದ್ದುಂಟು. ಸರ್ವಪಾಪನಾಶಕವಾದ ಅಶ್ವಮೇಧವನ್ನು ಮಾಡಬೇಕಾಗಿ ಅವನೇ ಹೇಳುವನು. ಆದ್ದರಿಂದ ರಾಮಾಯಣ ಕಾಲದ ಅಶ್ವಮೇಧದ ಕಲ್ಪನೆಯಲ್ಲಿ ದಿಗ್ವಿಜಯಕ್ಕೆ ಸ್ಥಾನವಿರಲಿಲ್ಲ ಎಂದು ತೋರುವದು.

ಜೈಮಿನಿ ಕೃತ ಅಶ್ವಮೇಧ ಪರ್ವದಲ್ಲಿ ಬರುವ ಈ ಮೇಧದ ಲಕ್ಷಣವು ಮತ್ತೆ ಸ್ವಲ್ಪ ಬೇರೇ ಆಗಿದೆ. ಅದು ಪದ್ಮಪುರಾಣಾಂತರ್ಗತ ರಾಮಾಶ್ವಮೇಧವನ್ನು ಹೆಚ್ಚಾಗಿ ಹೋಲುವದು. ಇಲ್ಲಿಯ ಕೆಲ ಲಕ್ಷಣಗಳು ಹೀಗಿವೆ:— ಚೈತ್ರ ಪೌರ್ಣಿಮೆಗೆ ದೀಕ್ಷೆ, ಕುರುಯುದ್ಧದ ಹಿಂಸಾಪಾಪಕ್ಷಾಲನಾರ್ಥವಾಗಿ ಯಜ್ಞ, ಕುದುರೆ ವರುಷದ ವರೆಗೆ ತಿರುಗುವದು, ಎಂಟು ಕುಂಡಗಳು, ಮೂರು ವೇದಿಕೆಗಳು, ಶ್ಯೇನಚಿತಿಯ ವಿಶಿಷ್ಟರಚನೆ, ೬೪ ದಂಪತಿಗಳು ಸ್ನಾನಕ್ಕಾಗಿ ನೀರು ತರುವದು, ಯೂಪಕ್ಕೆ ಕಟ್ಟಿದಲ್ಲಿಯೇ ಅಶ್ವವನ್ನು ಭೀಮನು ಕತ್ತಿಯಿಂದ ಹೊಡೆಯುವದು, ಅದರ ದೇಹದೊಳಗಿಂದ ಕಪ್ಪುರ ಬರುವದು, ಕಪ್ಪುರದ ಹವನವಾಗುವದು, ಅಶ್ವದ ಆತ್ಮಜ್ಯೋತಿ ಬಂದು ಕೃಷ್ಣನಲ್ಲಡಗುವದು ಇವೇ ಮೊದಲಾದವುಗಳು ಪದ್ಮಪುರಾಣದ ಸಹೋದರತ್ವವನ್ನು ಸೂಚಿಸುವವು.

ಪದ್ಮಪುರಾಣಾಂತರ್ಗತ ರಾಮಾಶ್ವಮೇಧಕಾರನೂ ಜೈಮಿನಿ ಅಶ್ವಮೇಧರಚನಾಕಾರನೂ ಒಬ್ಬನೇ ಆಗಿರಬೇಕೆಂದು ತೋರುವದು. ಅಲ್ಲಿಯ ರಾಮಕತೆಗಳು ಪರಸ್ಪರ ಪ್ರತಿಬಿಂಬಗಳಾಗಿವೆ.

# ಜೈಮಿನಿ ಅಶ್ವಮೇಧದ ರಚನಾಕಾಲ.

ಜೈಮಿನಿಯ ಅಶ್ವಮೇಧ ಪರ್ವವು ಜೈಮಿನಿಯ ಭಾರತದ ಭಾಗವೇ ಆಗಿರುವದೆಂದೂ, ಒಬ್ಬ ಜೈಮಿನಿಯು ವ್ಯಾಸರ ಶಿಷ್ಯನೇ ಆಗಿರುವದರಿಂದಲೂ ಈ ಗ್ರಂಥವು ಅತಿ ಪ್ರಾಚೀನವೆಂದು ತಿಳಿಯುವ ಜನರಿದ್ದಾರೆ. ಭಾಗವತ ಪುರಾಣವನ್ನು ಜೈ. ಅ. ಉಲ್ಲೇಖಿಸಿರುವದರಿಂದ ಭಾಗವತದ ಅನಂತರದಲ್ಲಿ ಇದರ ರಚನೆಯಾಗಿರುವದೆಂಬುದು ಸ್ಪಷ್ಟವೇ ಇದೆ, ಜೈ. ಭಾರತ ೫೮. ೯ ರಲ್ಲಿ "ಭಾರತಂ ಹರಿವಂಶಂಚ ಪುತ್ರದಂ ಧನದಂ ಭವೇತ್, ಶ್ರೀಮದ್ಭಾಗವತಂ ಪುಣ್ಯಂ ಭುಕ್ತಿ ಮುಕ್ತಿ ಫಲಪ್ರದಂ ಎಂದು ಬಂದ ಮಾತು ಜೈ. ಅ. ದ ಭಾಗವತಾವೇಶವನ್ನು ಸ್ಪಷ್ಟವಾಗಿ ಪ್ರಕಟಿಸುವದು. "Judging by the nature of Vishnu worship appearing in the work it is probably not earlier than the later works & sections of the Puran literature. At any rate it is later than the Bhagwat Puran quoted at the end of Chandrahasa legend" (Hist. of Indian Lit. Vol. I page 586, Winternitz.) ವಿಂಟರನೀಝು ಪಂಡಿತರಾದರೂ ಜೈ.ಅ.ವು ಭಾಗವತೋತ್ತರ ಕಾಲದ್ದೆಂದು ತಿಳಿಯುವರು. ವಿಲ್ಸನ್‌ರವರ ಮತವಾದರೂ ಹಾಗೆಯೇ ಇರುವದು. ಆದರೆ ಶ್ರೀಮದ್ಭಾಗವತವನ್ನೇ ಅತಿ ಪ್ರಾಚೀನ ಗ್ರಂಥ ವೆಂದು ತಿಳಿಯುವ ಜನರಿದ್ದಾರೆ. [ 'ಪುರಾಣನಿರೀಕ್ಷಣ' ಮಹಾರಾಷ್ಟ್ರಗ್ರಂಥ ಸಂಶೋಧಕರಾದ ಕಾ ಅವರು ಜೈ. ಅ. ಕಾಲವು ಕ್ರಿ. ಶ. ಪೂರ್ವ ೧೦೦ ಎಂದು ಹೇಳುವರು. ಪುಟ ೮೨ ] ಚಿತ್ರದುರ್ಗದ, ಶ್ರೀ ಜೋಸ್ಯರವರು ಜೈಮಿನಿಯ ಅಶ್ವಮೇಧೀಯ ಕಥೆಯಲ್ಲಿ ಗುಪ್ತಕಾಲದ ಕಥೆಯು ಅಡಕವಾಗಿರುವದೆಂದು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಒಂದು ಲೇಖನದಿಂದ ಸೂಚಿಸಿದ್ದಾರೆ. ಜೈ. ಅ. ದ ೫೫ ನೆಯಧ್ಯಾಯದ ೮ ನೆಯ ಪದ್ಯದಲ್ಲಿ ವರಾಹಮಿಹಿರನ ಉಲ್ಲೇಖವು ಬಂದಿರುವದು. ಆದ್ದರಿಂದ ಜೈ. ಅ. ಕ್ರಿ. ಶ. ೬ ನೆಯ ಶತಮಾನದ ಈಚೆಯದೆ ಆಗಬೇಕು. ಜೈ. ಅ. ದ ಮೇಲೆ ಪದ್ಮಪುರಾಣಂತರ್ಗತ ರಾಮಾಶ್ವಮೇಧದ ಸಂಪೂರ್ಣ ಛಾಯೆ ಇದೆ. ( ಪರಿಶಿಷ್ಟ ೧ ನೋಡಿರಿ ) ಈ ರಾಮಾಶ್ವಮೇಧದ ಭಾಗವನ್ನು ಕುರಿತು ಇಂಡಿಯನ ಕಲ್ಚರ್‌ದ ೧೯೩೭ರ ಜುಲೈ ಸಂಚಿಕೆಯಲ್ಲಿ ಪುಟ ೮೨-೮೩ ರ ಮೇಲೆ ರಾಜೇಂದ್ರಚಂದ್ರ ಹಜರಾ ಇವರು "Patala khanda chapters 1-68 do not seem to be very original, the fact that in Bengal mss. of the Khanda the first 28 chapters end with passing of Rama to heaven, indicates that the portion dealing with Rama's celebration of the horse sacrifice is the work of a different hand, otherwise, the story of the sacrifice would have preceeded that of Rama's

climbing the hevaen. Now, from the mention of the Bhag wat Puran in Patala 10-65 it seems that chapter 1-68 were written later than the sixth century A D. The occurence of the name of Tulsi plant in more places than one and the refernce to its worship tend to assign a much later date to to the chapters. It is highly probable that these chapters were added to the Patala khanda after the Mohammdens had come to India, because in Patala 33-43 the people are advisd not to drink water from the wells of Mlenchas. It is note worthy in this connection that none of the verses quoted by the Nibandha writers from the Padma Purana is found in the present Patala khanda. "

ಬಂಗಾಲ ಪ್ರಾಂತದಲ್ಲಿ ದೊರೆಯುವ ಪ್ರಾಚೀನ ಪುಸ್ತಕಗಳಲ್ಲಿ ಪದ್ಮಪುರಾಣದ ಪಾತಾಳಖಂಡ ೬೮ ನೆಯ ಅಧ್ಯಾಯದ ಕೊನೆಗೆ ರಾಮನು ಸ್ವರ್ಗವನ್ನು ಏರಿದ್ದಾನೆ. ಆದ್ದರಿಂದ ಅಶ್ವಮೇಧದ ಕಥೆಯು ಬೇರೊಂದು ಕೈಯ ಕೈವಾಡವಾಗಿರಲು ಸಾಕು. ಪಾತಾಳ ಖಂಡದ ೧೦. ೬೫ ರಲ್ಲಿ ಭಾಗವತ ಪುರಾಣದ ಉಲ್ಲೇಖ ಬಂದಿದೆ. (ನಾನು ನೋಡಿದ ಪದ್ಮಪುರಾಣದ ಪ್ರತಿಯಲ್ಲಿ ಪಾತಾಳಖಂಡ ೧೦. ೬೭ ರಲ್ಲಿ ರಾಮನು ಅಶ್ವಮೇಧ ಕಾಲಕ್ಕೆ ಶತ್ರುಘ್ನನಿಗೆ ಮಾಡಿರುವ ಉಪದೇಶದಲ್ಲಿ:- ಯೇಷಾಂ ಪ್ರಿಯಂ **ಭಾಗವತಂ** ಯೇಷಾಂವೈ ಬ್ರಾಹ್ಮಣಾಃಪ್ರಿಯಾಃ" ವೈಕುಂಠಾತ್ ಪ್ರೇಷಿತಾ ಸ್ತೇತ್ರ ಲೋಕಪಾಲನ ಹೇತವಃ" ಎಂದು ಇದೆ.) ಆದಕಾರಣ ಕ್ರಿ. ಶ. ೬ ನೆಯ ಶತಮಾನದ ಈಚೆಗೆ ಈ ರಾಮಾಶ್ವಮೇಧೀಯ ಅಧ್ಯಾಯಗಳು ಬರೆದವುಗಳಾಗಿರಬೇಕು. ತುಳಸಿಯುಗಿಡದ ಹೆಸರು, ಅದರ ಪೂಜೆಯ ವರ್ಣನೆಯು ಈಗ್ರಂಥವು ಇನ್ನೂ ಈಚೆಯದೆಂದು ಸೂಚಿಸುವದು. ಪಾತಾಳ ಖಂಡ ೩೩. ೪೩ ರಲ್ಲಿ ಮ್ಲೇಚ್ಛರ ಬಾವಿ-ನೀರನ್ನು ಜನರು ಕುಡಿಯಬಾರದೆಂಬ ಮಾತು ಬಂದಿರುವದರಿಂದ ಈ ರಾಮಾಶ್ವಮೇಧದ ರಚನೆಯು ಮಹಮ್ಮದಿಯರು ಭಾರತವನ್ನು ಪ್ರವೇಶ ಮಾಡಿದ ಅನಂತರದಲ್ಲಿ ಆಗಿರಬೇಕು:- ಎಂದು ತೋರುವದು. ನಿಬಂಧಕಾರರು ಪದ್ಮಪುರಾಣದಿಂದ ಉದ್ಧರಿಸಿದ ಯಾವೊಂದು ಶ್ಲೋಕವೂ ಸದ್ಯದ ಪಾತಾಳ ಖಂಡದಲ್ಲಿ ಇಲ್ಲ ಎಂಬ ಮಾತು ಗಮನಾರ್ಹವಾಗಿದೆ———ಎಂದು ಶ್ರೀ ರಾಜೇಂದ್ರಚಂದ್ರ ಹಜರಾ ಇವರು ಹೇಳಿ ಪದ್ಮಪುರಾಣದ ಪೂರ್ತಿಯ ಕಾಲವನ್ನು (ಎಂದರೆ ಪಾತಾಳ ಖಂಡವನ್ನೂ ತತ್ಸದೃಶ ಬೇರೆ ಭಾಗಗಳನ್ನೂ ಒಳಗೊಂಡು) ಕ್ರಿ. ಶ. ೧೬೦೦ ಕ್ಕೆ ಎಳೆದಿದ್ದಾರೆ.

ರಾಮಾಯಣದ ಪ್ರಕ್ಷಿಪ್ತವೆಂದು ತೋರುವ ಉತ್ತರಕಾಂಡದ ಅಶ್ವಮೇಧೀಯ ಅಧ್ಯಾಯಗಳಲ್ಲಿಯೂ ಅನುಲ್ಲಿಖಿತನಾದ ಸುರಥ ಎಂಬ ರಾಜನ ಹೆಸರನ್ನು ( नियुक्तो भरतो वीरो (?) स च हयान्वितः ॥ वीरेण सुरथेनैव पुरीं श्रुक्तिमतीं प्रति ॥ ९७९ ॥ जै. अ. )ಅಧ್ಯಾಯ ೫ ಶ್ಲೋಕ ೭೯ ಜೈ. ಅ.ದಲ್ಲಿ ಹೇಳಿದ್ದಾಗಿದೆ. ರಾಮನು ಈ ಸುರಥನನ್ನು ಸೋಲಿಸಿದನಂತೆ. ಆದರೆ ಈ ಕಥೆ ಪದ್ಮಪುರಾಣಾಂತರ್ಗತ ರಾಮಾಶ್ವಮೇಧದಲ್ಲಿ ಬರುತ್ತದೆ. ಬೇರೆ ಎಲ್ಲಿಯೂ ಬರುವದಿಲ್ಲ. ಅಧ್ಯಾತ್ಮ ರಾಮಾಯಣವೆಂದು ಒಂದು ಗ್ರಂಥವಿದೆ. ಅದು "ಆಧುನಿಕ ನಿರೂಪಣ" ವಾಗಿದೆಯೆಂದು ಮಹಾರಾಷ್ಟ್ರೀಯ ಸಂತ ಕವಿಯಾದ ಏಕನಾಥನು ಹೇಳುವನು. ಈ ಅಧ್ಯಾತ್ಮ ರಾಮಾಯಣದ ಅನುವಾದವೇ ಆನಂದ ರಾಮಾಯಣದಲ್ಲಿ ಅಲ್ಲಲ್ಲಿ ಕಂಡುಬರುವದು. ಈ ಆನಂದ ರಾಮಾಯಣದೊಳಗಿನ ಮೈರಾವಣ ಕಥೆಯನ್ನೆ **ಕುಮಾರ ವಾಲ್ಮೀಕಿ** ಬರೆದಿದ್ದಾನೆ. ಇದೇ ಕಾಲದವನೇ ಲಕ್ಷ್ಮೀಶ.ಜೈ.ಅಶ್ವಮೇಧ ಪ್ರಸಿದ್ಧಿಯ ಕಾಲವೂ ಬಹಳ ಹಿಂದಿನದೇನೂ ಅಲ್ಲ. ಆನಂದ ರಾಮಾಯಣದಲ್ಲಿ ಈಗ ಜನಪ್ರಿಯವಾದ ರಾಮರಕ್ಷಾ ಸ್ತೋತ್ರವು ಬಂದಿದೆ. ಕ್ಷೇತ್ರವರ್ಣನಾವಸರದಲ್ಲಿ ಶ್ರೀರಂಗಶಯನ, ಶೃಂಗೇರಿಯ ಶಾರದೆ, ಉಡುಪಿಯ ಕೃಷ್ಣ, ಶಿವಕಂಚಿ, ವಿಷ್ಣುಕಂಚಿ, ತಿರುಪತಿ ವೆಂಕಟೇಶ, ಪಾಂಡುರಂಗಗಳ ಹೆಸರು ಬಂದಿವೆ. ವಿಜಾಪುರ, ದೇವಗಿರಿ ಬಂದಿವೆ. ಉಡುಪಿಯ ಕೃಷ್ಣನಂತೂ ಮಧ್ವಾಚಾರ್ಯರ ಅನಂತರದಲ್ಲಿ ಬಂದವನು. ಹೀಗಾಗಿ ಆನಂದ ರಾಮಾಯಣವು ಮಧ್ವಾಚಾರ್ಯರಿಗೆ ಉತ್ತರ ಕಾಲೀನವು. ಇದರೊಳಗಿನ ರಾಮರಕ್ಷಾ ಸ್ತೋತ್ರದ ತುಂಡುಗಳೇ ಜೈಮಿನೀಯ ಅಶ್ವಮೇಧದ ರಾಮಸ್ತುತಿಗಳಲ್ಲಿ ತಲೆಯೆತ್ತುವದುಂಟು. ಏನೇ ಇದ್ದರೂ ಜೈಮಿನಿಯ ಅಶ್ವಮೇಧವು ರಾಮಾನುಜ, ಮಧ್ವರ ಉತ್ತರ ಕಾಲದ ಭಾಗವತ ಚಳವಳಿಯ ಸಂದರ್ಭದಲ್ಲಿ ಉದಿಸಿದ ಗ್ರಂಥವಾಗಿರಬೇಕೇ ಹೊರತು ಅದು ಬಹಳ ಪ್ರಾಚೀನವಾಗಿರಲಾರದು. ಜೈ ಅ. ದೊಳಗಿನ ಯಾವ ವಿಷ್ಣುಭರನ್ನೂ ಮಹಾರಾಷ್ಟ್ರದ ಪ್ರಸಿದ್ಧ ಸಂತಕವಿಗಳಾಗಲಿ, ಕರ್ನಾಟಕದ ವೈಷ್ಣವ ದಾಸರಾಗಲಿ ಸ್ಮರಿಸಿಲ್ಲ. ಪುರಂದರ ದಾಸರ ಪದ್ಯಗಳಲ್ಲಿ ಮಯೂರಧ್ವಜನ ಉಲ್ಲೇಖವು ಒಂದೇ ಒಂದು ಸಲ ಬರುವದು. ಚಂದ್ರಹಾಸನ ಹೆಸರಿಲ್ಲ. ಜ್ಞಾನದೇವ, ನಾಮದೇವ, ತುಕಾರಾಮ ಇವರಾರೂ ಚಂದ್ರಹಾಸ ಮಯೂರಧ್ವಜರ ಹೆಸರನ್ನೆತ್ತಿಲ್ಲ. (ವಿಷ್ಣುದಾಸನಾಮಾ ಎಂಬ ಮಹಾರಾಷ್ಟ್ರ ಕವಿಯೂ,ಕನಕದಾಸರು, ಮೋಹನ ತರಂಗಿಣಿ (೫. ೫೪) ಯಲ್ಲಿಯೂ ಈ ಕಥೆ ಸ್ಮರಿಸುವರು.) ಜೈ. ಅಶ್ವಮೇಧವು ಭಾಗವತ

ಪಂಥೀಯವಾದರೂ ಪ್ರಸಿದ್ಧ ಭಕ್ತರು ಅದನ್ನು ಬಹಳ ಆದರಿಸಿಲ್ಲವಾಗಿ ತೋರುವದು. ಮಹಾರಾಷ್ಟ್ರ ಭಾಷೆಯಲ್ಲಿ ಜೈಮಿನೀಯ ಅಶ್ವಮೇಧವನ್ನು ಅವಲಂಬಿಸಿ ೧೦-೧೧ ಗ್ರಂಥಗಳಿರುವವಾದರೂ ಶ್ರೀಧರ ಕವಿಯ ಪ್ರಸಿದ್ಧ ಜೈಮಿನಿ ಭಾರತವು ೧೮ ನೆಯ ಶತಮಾನದ್ದು. ಇದ್ದುದರಲ್ಲಿ ಪ್ರಾಚೀನವೆನಿಸಬಹುದಾದ ನಾವಾಪಾಠಕನ ಜೈಮಿನಿಯು ೧೬ ನೆಯ ಶತಮಾನದ ಆರಂಭದ್ದಾಗಬಹುದು. ವಿಜಯನಗರದ ಸಾಳ್ವನರಸಿಂಗನ ಕಾಲದ ಪಿಲ್ಲಲ ಮರ್ರಿಪಿನ ವೀರಭದ್ರನೆಂಬ ಕವಿಯು ಜೈ. ಅ. ವನ್ನವಲಂಬಿಸಿ ತೆಲುಗಿನಲ್ಲಿ ಒಂದು ಚಿಕ್ಕ ಚಂಪೂಕಾವ್ಯವನ್ನು ಬರೆದಿದ್ದಾನೆ. ಇದು ಸಾಳುವ ನರಸಿಂಹರಾಯನಿಗೆ ಅರ್ಪಿತವಾಗಿದೆ. ಅಂತೆಯೆ ಇದರ ಕಾಲ ಸು. ೧೪೯೦-೧೪೯೮. ಪ್ರಾಂತೀಯ ಭಾಷೆಗಳಲ್ಲಿ ಸಂಸ್ಕೃತ (ಅಶ್ವಮೇಧ) ಜೈಮಿನಿಗೆ ಸಿಕ್ಕ ಆದರದ ಕಾಲವನ್ನೂ ವಿಮರ್ಶಿಸಿದರೆ ಆ ಗ್ರಂಥವು ೧೪ ನೆಯ ಶತಮಾನದ ಆದಿಯಲ್ಲಿಯೊ ಕೊನೆ ಕೊನೆಗೊ ಹುಟ್ಟಿದ್ದಾಗಿರಬಹುದೆಂದು ತೋರುವದು. ದೇವಗಿರಿಯ ಹೇಮಾದ್ರಿ ಬೋಪದೇವರ ಭಾಗವತ ಚಳವಳಿಯಲ್ಲಾಗಲಿ, ವಿದ್ಯಾರಣ್ಯ ಸಾಯಣ ಭೋಗನಾಥರ ವಾಙ್ಮಯಾಂದೋಲನದ ಕಾಲದಲ್ಲಾಗಲಿ ಇದು ಹುಟ್ಟಿರಲು ಸಾಕು. ಹೀಗಿರುವಾಗ ಲಕ್ಷ್ಮೀಶನ ಜೈಮಿನಿಯು ಪೂಜ್ಯರಾದ ಶ್ರೀ ಗೋವಿಂದ ಪೈಗಳವರು ಸೂಚಿಸುವಂತೆ ಕ್ರಿ. ಶ. ೧೩೩೫ ರಿಂದ ೧೩೫೩ ಇಷ್ಟು ಪ್ರಾಚೀನವಿರುವ ಸಂಭವ ತೀರ ಕಡಿಮೆ ಎಂದು ನನಗೆ ತೋರುತ್ತದೆ. ಮಹಾರಾಷ್ಟ್ರ, ಆಂಧ್ರ, ಕರ್ನಾಟಕಗಳಲ್ಲಿ ಸುಮಸುಮಾರಾಗಿ ಒಂದೇ ಕಾಲಕ್ಕೆ ಅಂದರೆ ೧೫ನೆಯ ಶತಮಾನದ ಉತ್ತರಾರ್ಧದಲ್ಲಿಯೊ ೧೬ನೆಯ ಶತಮಾನದ ಪೂರ್ವಾರ್ಧದಲ್ಲಿಯೊ ಜೈಮಿನಿಯ ಭಾಷಾಂತರಗಳು ಅವತರಿಸಲು ಅನಕೂಲ ಕಾಲ ಉಂಟಾಗಿತ್ತೆಂದು ತೋರುವದು. ಪುಣೆಯ ಭಾಂಡಾರಕರ ಪ್ರಾಚೀನ ವಿದ್ಯಾಸಂಶೋಧನ ಸಂಸ್ಥೆಯಲ್ಲಿರುವ ಪ್ರತಿಗಳಲ್ಲಿ ಅತ್ಯಂತ ಪ್ರಾಚೀನ ಜೈ. ಅ. ದ ಪ್ರತಿಯೆಂದರೆ ಕ್ರಿ. ಶ. ೧೫೮೫ರದು ಎಂದು ಅಲ್ಲಿಯ ಕ್ಯೂರೇಟರರಾದ ಡಾ. ಗೋಡೆಯವರು ಒಂದು ಕಾಗದದಲ್ಲಿ ನಮಗೆ ತಿಳಿಸಿದ್ದರು. ವಿಂಟರನಿಝರವರು ಲಕ್ಷ್ಮೀಶನ ಜೈಮಿನಿಯ ಕಾಲವನ್ನು ತಮ್ಮ ಒಂದು ಅಡಿ ಟಿಪ್ಪಣಿಯಲ್ಲಿ (History of Indian Literature) ೧೫೮೫ ರಿಂದ ೧೬೨೪ ಎಂದು ಬರೆದಿದ್ದಾರೆ. ಈ ಅಂದಾಜು ಸರಿಯಾಗಿಲ್ಲ.

---

# ನಾದಲೋಲ ಲಕ್ಷ್ಮೀಶ.

## (೧)

ಕಾವ್ಯವು ದೃಶ್ಯ, ಶ್ರಾವ್ಯ ಎಂದು ಎರಡು ಬಗೆ. ದೃಶ್ಯ ಕಾವ್ಯಗಳಾದ ನಾಟಕಾದಿಗಳನ್ನು ಓದಿಯಾಗಲಿ, ನಟನಿಂದ ಓದಿಸಿಯಾಗಲಿ, ಫಲವಿಲ್ಲ; ಅವನ್ನು ರಂಗಭೂಮಿಯಲ್ಲಿ ಆಡಿಸಿ ನೋಡಬೇಕು. ಹಾಗೆಯೆ ಶ್ರಾವ್ಯಗಳಾದ ಕಾವ್ಯಗಳ ದರ್ಶನದಿಂದ ಆಗಬೇಕಾದ ಲಾಭವಿಲ್ಲ; ಅದಕ್ಕೆ ಶ್ರವಣ ಬೇಕು. ನಮ್ಮ ಕನ್ನಡ ವಾಙ್ಮಯದಲ್ಲಿ ವೃತ್ತಭೂಯಿಷ್ಟವಾಗಿಯೂ ವಚನಮಯವಾಗಿಯೂ ಇರುವ ಚಂಪೂಕಾವ್ಯಗಳನ್ನು ಓದುಗಬ್ಬಗಳೆಂದೂ, ಷಟ್ಪದಿ-ಸಾಂಗತ್ಯಾದಿಗಳನ್ನು ಹಾಡುಗಬ್ಬಗಳೆಂದೂ, ಕರೆದಿರುವುದೇನೋ ನಿಜ. ಆದರೆ ಅದಕ್ಕೆ ಪ್ರತಿಯಾಗಿ ವಚನಗಳನ್ನು ಹಾಡಿದರು-ಎಂಬುದಾಗಿಯೂ, ಕಾವ್ಯವನ್ನು ಓದಿದರು-ಎಂಬುದಾಗಿಯೂ, ಕೆಲವೆಡೆಗಳಲ್ಲಿ ಹೇಳಿದುದುಂಟು. ಪದಪ್ರಯೋಗವೇನೆ ಇರಲಿ, ಎಲ್ಲ ಕವಿಗಳ ಇಚ್ಛೆಯು ಸ್ಪಷ್ಟವಾಗಿದೆ. ಕಂಟದಿಂದ ತಾಳೆಯೋಲೆಯ ಮೇಲೆ ಮೂಡಿದ ಶಬ್ದಸಂತತಿಯು ಕಾವ್ಯವಲ್ಲ; ಕವಿ-ಗಮಕಿಗಳ ಕಂಠದಿಂದ ರಸಿಕರ ಹೃತ್ಪಟಲದಲ್ಲಿ ಮೂಡಿದುದು ಕಾವ್ಯ. ಹಾಡುಗಾರನ ಹಾಡು ಆವನ ಸೊಲ್ಲಿನೊಡನೆ ಅಡಗುವ ಅವನ ಜೀವದ ಛಾಯೆ. ಹಾಡು, ಹಾಡಿಕೆ ಮತ್ತು ಹಾಡುಗಾರ ಇದೊಂದು ತ್ರಿವೇಣೀ ಸಂಗಮವು. ಇದನ್ನು ಬಿಂಗಡಿಸಲು ಬರದು. ಆದರೆ ಕವಿಯ ಮಾತು ಹಾಗಲ್ಲ. ಅವನು ತನ್ನ ಕಾವ್ಯಶರೀರವನ್ನು ಶಬ್ದಮೂರ್ತಿಯಲ್ಲಿ ಎರಕ ಹೊಯ್ದಿಡಬಲ್ಲ. ಆದರೆ ಆ ಶಬ್ದಶರಿರವೋ ಚಂದ್ರಾಪೀಡನ ಕಳೇವರದಂತೆ. ಗಮಕಿಯು ತನ್ನ ಉಸಿರೂದಿ ಅದಕ್ಕೆ ಜೀವಕಳೆ ತುಂಬಬೇಕು. ಧ್ವನಿಯು ಮೈಗರೆದಿರಬಹುದಾದರೂ, ನುಡಿಯ ನೆರಳು ತಲೆದೋರಿ ನಿಲ್ಲಬಹುದು-ಇದೇ ಕಾವ್ಯದ ವಿಚಿತ್ರ ಜೀವನ. ಮೊನ್ನೆ ಮೊನ್ನೆ ಗತಿಸಿದ ವೀಣೆಯ ಶೇಷಣ್ಣನವರ, ಬಿಡಾರ ಕೃಷ್ಣಪ್ಪನವರ ಗಾನಮಾತೃಕೆಗಳು ಅವರೊಡನೆ ಗತಿಸಿದವು. ನೂರಾರು ವರ್ಷಗಳ ಹಿಂದಿನ ಲಕ್ಷ್ಮೀಶ, ಕುಮಾರವ್ಯಾಸರ ಕಾವ್ಯವು ಇನ್ನೂ ಇದೆ. ಹೇಗೆ?-

ಎಂದರೆ, ಚಂದ್ರಾಪೀಡನ ಕಳೇವರದಂತೆ, ಎಂದೇ ನಾವು ಉತ್ತರಕೊಡಬೇಕು. ಕಾವ್ಯ ವಿಷಯದಲ್ಲಿ ಕವಿಗೆ ಪಿತೃಪದವಿ, ರಸಿಕರಿಗೆ ಜಾಮಾತೃಪದವಿ ಎಂದು ಹೇಳಿದ್ದಾರೆ. ಆದರೆ ಗಮಕಿಗೆ ಸಂಜೀವನ ಶಕ್ತಿಯುಳ್ಳ ಬ್ರಹ್ಮಪದವಿಯೆಂದು ಒತ್ತಿ ಹೇಳಬೇಕಾಗಿದೆ. ಅಥವಾ ವೀರಶೈವರೊಳಗಿನ ಲಿಂಗದೀಕ್ಷಾ ಗುರುಪದವಿ ಎಂದು ಹೇಳಿದರೂ ನಡೆಯುವುದು. ಆಡಿದ ಮಾತಿನ ಜೀವವು ಬರೆದ ಶಬ್ದಸಂಕೇತದಲ್ಲಿ ಬರದು. ಕಿವಿಯಿಂದ ಒಳಗೆ ಹೊಗಬೇಕು, ರಸವನ್ನೀಂಟಿಸಬೇಕು, ಆಗಲೆ ಆ ಕಾವ್ಯದ ಜನ್ಮ ಸಾರ್ಥಕವಾಯಿತು.

ವಾಚ್ಯವಾದ ಶಬ್ದಾರ್ಥಗಳು ಕಣ್ಣಿಗೆ ಕಾಣುವವು. ಆದರೆ ಯುಕ್ತಧ್ವನಿಯಿಲ್ಲದೆ ಭಾವವು ಹುಟ್ಟದು; ಅದು ಇಲ್ಲದೆ ಕವಿಹೃದಯವು ರಸಿಕ ಹೃದಯವನ್ನು ಮುಟ್ಟದು. ಶಬ್ದಕ್ಕೂ ವಾಚ್ಯಾರ್ಥಕ್ಕೂ ಇರುವ ಸಂಬಂಧವು ರೂಢ ಅಥವಾ ಸಾಂಕೇತಿಕವೆಂದು ಹೇಳಬಹುದಾದರೂ, ಕವಿಯು ಯೋಜಿಸುವ ಅಕ್ಷರಸಮೂಹಕ್ಕೂ ಅವನ ಭಾವನೆಗೂ ಇರುವ ಸಂಬಂಧವು ನಿಸರ್ಗಸಿದ್ಧವಾಗಿದೆ. ಕವನ ಸಂಗೀತಗಳು ಅವಳಿ ಜವಳಿಗಳಂತೆ ಕಾಣುವುದು ಇಲ್ಲಿಯೇ. ಆದರೆ ಸಂಗೀತವು ವಿದೇಹ; ಕವನವು ಸದೇಹ. ಸಂಗೀತವು ಪ್ರಾಣಮಾತ್ರ, ಕವನವು ಪ್ರಾಣದ ಗೋಚರಮೂರ್ತಿ. ಮೂರ್ತಿಯ ದೇಹ ಲಕ್ಷಣಗಳಲ್ಲಿ ಪ್ರಾಣದ ಪದವಿಯನ್ನು ಹೊಳೆಯಿಸುವುದು ಗಮಕಿಯ ಕಾರ್ಯ. ಗಮಕಿ ಗಾಯಕನಲ್ಲ. ಗಾಯಕನದು ವಾಯುವಿಹಾರ, ಗಮಕಿಯೋ ಶಬ್ದಾರ್ಥ ಸಾಹಿತ್ಯದಿಂದ ಕದಲಲಾಗದು. ಗಾಯಕನು ಸಾಹಿತ್ಯವನ್ನು ಮೂಸಿನೋಡಿದ್ದಾದರೆ ಅವನಿಗೆ 'ರಾಗವೇ ರಸ, ಪದವು ಕಸ.' ನಮ್ಮ ದಾಸರ ಸಾಹಿತ್ಯದಲ್ಲಿ ರಾಗವು ರಸವಾಗಿ ಪದವು ಕಸವಾಗಿದ್ದ ಉದಾಹರಣೆಗಳು ಅಡಿಗೊಮ್ಮೆ ಎಡಹುವಷ್ಟು ದೊರೆಯುವವು. ದಾಸರಿಗೆ ಶಬ್ದಸಾಹಿತ್ಯವು ಈಸಬಲ್ಲವನು ಲೀಲೆಗಾಗಿ ಕಟ್ಟಿಕೊಂಡ ಈಸುಗುಂಬಳಕಾಯಂತೆ. ಕವಿಗಳಿಗೆ ಹಾಗಲ್ಲ. ಅವರಿಗೆ ರಸಾವತಾರಕ್ಕೆ ಸಲಕ್ಷಣವಾದ ದೇಹವೇ ಈ ಶಬ್ದವು; ಶಬ್ದಕ್ಕಿಂತ ಆ ನಾದವು. 'Poetry is suggestive sound' (Lamborn) 'ವ್ಯಂಜ್ಯಕವಾದ ನಾದವೇ ಕಾವ್ಯ' ಎಂದೂ 'Misers of sound and syllable' (Keats) 'ನಾದಗಳನ್ನೂ ಅಕ್ಷರಗಳನ್ನೂ ಒರೆದುನೋಡುವ ಜಿಪುಣರೀ ಕವಿಗಳು' ಎಂದೂ ಹೇಳಿದುದು ಯಥಾರ್ಥವಾಗಿದೆ. ಅಕ್ಕರಕ್ಕರದ ನೆಲೆ ಬೆಲೆಯರಿಯದವರು ಅಕ್ಕರಿಗರು ( Men of Letters ) ಹೇಗಾದಾರು ? ಇದನ್ನು ವ್ಯಕ್ತೀಕರಿಸುವುದೇ ಗಮಕಿಯ ಗಮಕ. ಗಮಕಿಯು ಕಾವ್ಯವೇದದ ಭಾಷ್ಯಕಾರನು. ಗಾಯಕನ ಗಾನದಂತೆ ಇದೂ ಮಿಂಚಿ ಮೂಡಿ ಲೀನವಾಗುವ ತೇಜ. ಕವಿ-ಗಮಕಿ-ವಾದಿ-ವಾಗ್ಮಿಗಳು ಒಂದೆ ಮಾಲೆಯೊಳಗಿನ ಮಣಿಗಳು. ಪೂರ್ವದ ರಾಜಾಸ್ಥಾನಗಳಲ್ಲಿ ಇವರೆಲ್ಲರಿಗೂ ಮನ್ನಣೆಯಿತ್ತು. ನಮ್ಮಲ್ಲಿ ಕಲಾಪ್ರೀತಿಯು ಕುಗ್ಗುತ್ತ ಹೋದಂತೆ

ಗಮಕಿಯ ಸ್ಥಾನವೂ ಮಸುಳುತ್ತ ಬಂದಿತು. ಗಮಕಿತ್ವದ ಅಸ್ತವೇ ರಸಿಕತ್ವದ ಲೋಪ. ಹೀಗಾಗಿ ಇದ್ದ ಕಾವ್ಯಗಳ ಬೆಳಕೂ ಬೀಳುವಷ್ಟು ಬೀಳಲಿಲ್ಲ. ಜೈಮಿನಿ ಭಾರತವು ಇಂದಿಗೂ ಎಷ್ಟೇ ಜನಪ್ರಿಯವಾಗಿದ್ದರೂ, ಗಮಕಿಗಳ ಭಾಷ್ಯವಿಲ್ಲದೆ ಅದರ ಜೀವದ ಸ್ವರವಿನ್ನೂ ಕೇಳುತ್ತಿಲ್ಲ ನಮಗೆ ಈಗ ಕೇಳುತ್ತಿರುವುದು ಅದರ ಸಪ್ಪುಳು ಮಾತ್ರ. ಲಕ್ಷ್ಮೀಶನು ನಾದೋಪಾಸಕ. ಅವನ ಕವನದಲ್ಲಿ ನಾವು ನಾದದ ಬೆಲೆಯನ್ನು ಕಂಡುಕೊಳ್ಳದಿದ್ದರೆ ನಾವು ಏನನ್ನೂ ಕಂಡಂತಲ್ಲ. ಗಮಕಿಗಳಿಲ್ಲದೆ ಲಕ್ಷ್ಮೀಶನ ಜೈಮಿನಿಗೆ ತಟ್ಟಿದಷ್ಟು ಹಾನಿಯು ಮತ್ತಾವ ಕಾವ್ಯಕ್ಕೂ ತಟ್ಟಿಲ್ಲ.

ಲಕ್ಷ್ಮೀಶನು 'ಕಾವ್ಯಮಿದು ಭುವನದೊಳ್ಸಕಲ ಜನರಿಂದೆ ಸುಶ್ರಾವ್ಯಮಪ್ಪಂತೆನ್ನವದನಾಬ್ಜದಲ್ಲಿ ನೀನೇ ವ್ಯಾಪಿಸು' ಎಂದು ಬೇಡಿಕೊಳ್ಳುವನು. ಇಷ್ಟೇ ಅಲ್ಲ:

ಜಾಣರಂ ತಲೆದೂಗಿಸದೆ ನುಡಿದೊಡಾಪದ |
ಕ್ಷೊಣಿಯಂ ಬಹುದೆಂದು ಸರಸೋಕ್ತಿಯಿಂದೆ ಗೀ |
ರ್ವಾಣ ಪುರನಿಲಯ ಲಕ್ಷ್ಮೀವರಂ ತಾನೆ ಸಂಗೀತಸುಕಲಾನಿಪುಣನು |
ವೀಣೆಯಿಂಗಾನನುಂ ನುಡಿಸುವಂದದೊಳೆನ್ನ |
ವಾಣಿಯಿಂ ಕವಿತೆಯಂ ಪೇಳಿಸಿದನು,........

ಎಂದು ಹೇಳುವನು. ವಾಲ್ಮೀಕಿಯ ರಾಮಾಯಣವನ್ನು ಹೇಳುವ ಲವಕುಶರೂ

ವಿಣೇಯಂ ಕೈಗಿತ್ತು ಬಾಲಕರ ವದನದೊಳ್- |
ವಾಣಿ ತಾಂ ನೆಲಸಿದಳೊ ಗಾನದೇವತೆಯ ಮೈ |
ಗಾಣಿಕೆಯೊ ಮೋಹನದ ತನಿರಸವೊ ಸೊಗಯಿಸುವ ಕರ್ಣಾಮೃತವೊ ಪೇಳೆನೆ |
ಜಾಣುಣ್ಮೆ ಜೋಕೆಯಿಂ ಜತಿ-ರೀತಿ-ತಾಳ-ಪ್ರ- |
ಮಾಣ-ಕಂಪಿತ-ಮೂರ್ಛೆ-ರಸ-ಪಾಡು-ಬೆಡಗು-ಬಿ |
ನ್ನಾಣ-ಲಯಮಾಹತಪ್ರತ್ಯಾಹತವ್ಯಾಪ್ತಿಯರಿದು ಕೇಳಿಸಿದರವರು ||

ಎಂತೆ. ಕವಿತೆಯನ್ನು 'ಗೇಯರಸಮೊಸರು'ವಂತೆ ಹಾಡಬೇಕೆಂಬುದು ಲಕ್ಷ್ಮೀಶನ ಅಭಿಪ್ರಾಯ. ಅದಕ್ಕೆ ಅನುಕೂಲವಾಗುವಂತೆಯೆ ಅವನ ಶಬ್ದರಚನೆಯಿದೆ. ಇದನ್ನು ಅವನು ಬಲ್ಲನು. ಚತುರಪದಗತಿಯು, ಸರಸ ಧ್ವನಿಯು, ಲಾಲಿತಶ್ರುತಿರಂಜನವು ಪ್ರೌಢಪ್ರಬಂಧದ ಲಕ್ಷಣವೆಂದು ಅವನು ಬಗೆದಿದ್ದನು. ಅವನ ಷಟ್ಪದಿಯಾದರೂ ಅದಕ್ಕೆ ಸರಿಯಾಗಿ 'ನಿರುತ ಮಂಜುಳ ಶಬ್ದದಿಂದ ಕಿವಿಗಿಂಪಾಗಿ' ಚರಿಸುತ್ತಲಿತ್ತು.

ಈ ರೀತಿಯಲ್ಲಿ ರಚಿತವಾದ ಕಾವ್ಯವನ್ನು ಅದರ ಸಾರ್ಥಕವಾಗುವಂತೆ ಹಾಡುವುದು ಗಮಕಿಯ ಕಾರ್ಯವಾಗಿದೆ. ಶ್ರೀಮಾನ್ ಭಾರತ ಬಿಂದೂರಾಯರು ಕುಮಾರ ವ್ಯಾಸನ ವಾಣಿಯನ್ನು ತಮ್ಮ ಗಮಕಿತ್ವದಿಂದ ಲಾಸ್ಯವಾಡಿಸುತ್ತಿದ್ದಾರೆ. ಅದನ್ನನು ಸರಿಸಿ ಯಾರಾದರೂ ತರುಣ ಗಮಕಿಗಳು ಲಕ್ಷ್ಮೀಶನ ಸೇವೆಮಾಡಿದ್ದಾದರೆ ಆಗ ಲಕ್ಷ್ಮೀಶನ ವಾಣಿಯ ವೀಣೆಯ ಇಂಪು ವಿಶದವಾಗುವುದು. (ಈಗ ಆ ಕಾಲ ಬರುತ್ತ ಲಿವೆ.) ಹಾಗೆ ನೋಡಿದರೆ ಕುಮಾರವ್ಯಾಸನಿಗಿಂತ ಲಕ್ಷ್ಮೀಶನಿಗೇ ಗಮಕಿಗಳ ಅಗತ್ಯವು ಹೆಚ್ಚಾಗಿದೆ. ಇನ್ನೂ ಶಬ್ದಾಲಂಕಾರಗಳೆಂದು ತಿಳಿಯಲ್ಪಡುವ ಅವನ ಯಮಕಪ್ರಾಸಾ ನುಪ್ರಾಸಾದಿಗಳು ರಸಸೃಷ್ಟಿಗೂ ಪುಷ್ಟಿಗೂಬೇಕಾದ ಸಾಹಿತ್ಯವೆಂಬುದು ಆಗ ತಾನೆ ತಿಳಿ ಯಬೇಕು! ಕಡಲಂತೆ ಮೊರೆಯುವ, ಪಡೆಯಂತೆ ಹುಯ್ಲಿಡುವ, ಕಾಮಿನಿಯರಂತೆ ಕ್ರೀಡಿಸುವ, ಗಾಳಿಯಂತೆ ಸುಳಿಯುವ, ಹೊಳೆಯಂತೆ ಹರಿಯುವ, ದುಃಖಿತರಂತೆ ನರ ಳುವ, ಹೂವಿನಂತರಳುವ, ಕಾಡಿನಂತೆ ಕೆಂಗೆಡಿಸುವ, ಬನದಂತೆ ಕಂಗೊಳಿಸುವ, ಬಾಲ ರಂತಾಡುವ, ಹಕ್ಕಿಯಂತೆ ಹಾಡುವ ಲಕ್ಷ್ಮೀಶನ ಲೀಲಾವತಾರಿಯಾದ ಷಟ್ಪದಿಯ ಸೊಗಸು, ಸೊಬಗು, ಬೆಡಗು, ಯಮಕ, ಒಯ್ಯಾರಗಳು ಗಮಕಿಗಳಿಂದಲೆ ಪ್ರಕಾಶ ಹೊಂದಬೇಕು. ಲಕ್ಷ್ಮೀಶನು ಹೆಚ್ಚಾಗಿ ರಸಪಕ್ಷಪಾತಿ; ಅವನನ್ನು ಅರ್ಥಪ್ರಪಂಚವು ಆಕರ್ಷಿಸುವದಿಲ್ಲ. ಪಾತ್ರಸೃಷ್ಟಿಯು ಮೋಹಿಸುವದಿಲ್ಲ. ವಸ್ತುರಚನಾಸಂದರ್ಭವು ಬಂಧಿಸುವದಿಲ್ಲ. ಅವನು ನೇರವಾಗಿ ತನ್ನ ಕಾವ್ಯನೌಕೆಯನ್ನು ರಸೋದಧಿಯಲ್ಲಿ ನೂಕಿಬಿಡುವನು. ಅಷ್ಟಾದಶ ವರ್ಣನೆಯ ಅಂಶವಿರಲಿ, ಅನಂತಭಾವರಸಗಳ ಲೇಶವಿ ರಲಿ, 'ಸವಿದನಿಯಿಂದ ಸಮೆದ' ಆದೊಂದು ಲೋಕದಲ್ಲಿ ಅವನು ನಮ್ಮನ್ನು ಹೊಗಿಸಿಬಿ ಡುವನು. ವಿಗಲಿತವೇದ್ಯಾಂತರವಾದ ಆನಂದವೆಂದರೇನೆಂಬುವ ಅನುಭವವು ಬರುವದು ಆಗ. ಆದರೆ ಲಕ್ಷ್ಮೀಶನ ನಾದವೀಣೆಯನ್ನು ನುಡಿಸಬಲ್ಲ ಬಲ್ಲಿದನಾದ ಗಮಕಿ ಬೇಕು ಅದಕ್ಕೆ. ಇಲ್ಲದಿದ್ದರೆ ಎಲ್ಲವೂ ನೈಯಾಯಿಕರ ಘಟಪಟಾಧ್ಯಾಯವಾಗಿಯೋ ನಾಡಾ ಡಿಗಳ ರಂಜನೆಯ ಗುಂಜಾರವವಾಗಿಯೋ ಗಾಳಿಗೆ ಗಾಳಿ ಬಯಲಿಗೆ ಬಯಲಾ ಗಬಹುದು.

ರಸಃ ಕೋಪ್ಯಸ್ತು ಕಾವ್ಯಸ್ತು ರೀತಿಃ ಕೋಪ್ಯಸ್ತು ವಾ ಗುಣಃ |
ಸಗರ್ವಂ ಸರ್ವಕರ್ಣಾಟಾಷ್ಟಂಕಾರೋತ್ತರ ಪಾಠಿನಃ ||

'ರಸವು ಯಾವದೇ ಇರಲಿ, ರೀತಿಯು ಏನೇ ಇರಲಿ, ಗುಣವು ಎಂತಹದೇ ಇರಲಿ, ಎಲ್ಲ ಕರ್ನಾಟಕರೂ ಬಿಂಕದ ಟಂಕಾರದಿಂದ ಕವಿತೆಯನ್ನೋದುವರು' ಎಂದು

ಪಂಪನ ಸಮಸಾಮಯಿಕನಾನ ರಾಜಶೇಖರನೆಂಬ ಸಂಸ್ಕೃತ ಕವಿಯು ತನ್ನ ಕಾವ್ಯ ಮೀಮಾಂಸೆಯ ಪಾಠಪ್ರತಿಷ್ಠಾಧ್ಯಾಯದಲ್ಲಿ ಬರೆದಿದ್ದಾನೆ. ಕನ್ನಡಸಾಹಿತ್ಯದಲ್ಲಿ ಗಮಕಿಗಳ ಗಮಕದ ವಿಷಯ ಬಂದ ಒಂದೆಡೆಗೂ ಈ ನಿಂದೆಗೆ ಎಡೆಗೊಡುವ ಛಾಯೆ ಕೂಡ ಕಂಡುಬರದು. ರಾಜಶೇಖರನು ಯಾವ ಗಮಕಿಯನ್ನು ಕಂಡು ಹೀಗೆ ಬರೆದನೊ ದೇವರೆ ಬಲ್ಲ !

(೧) ಗಾನ-ತಾನ-ಮಾನಂಗಳಂ ತೋರಿ |
ಅರ್ಥೋಲ್ಲೇಖಾದಿ ಸಾಂದರ್ಭಿಕ ಮಿಶ್ರಮನರಿತು |
ಪದಸಂವ್ಯಕ್ತಿಗೈದು | ಕೇಳ್ವರಿಗಿಂಪುಗೊಳಿಸಿ |
ಮೃದುಮಧುರವ್ಯಕ್ತವರ್ಣೋಚ್ಚಾರಣದಿಂ ಭಾವಸೂಚಕರಾದ ಗಮಕಿಗಳು-
—ವಿವೇಕಚಿಂತಾಮಣಿ'-ಶಂಭುಲಿಂಗಾಂಕಿತ ನಿಜಗುಣ ಶಿವಯೋಗಿ.

ಇದರಲ್ಲಿ 'ರಸಃ ಕೋಪ್ಯಸ್ತು ಕಾಪ್ಯಸ್ತು' ಎನ ಯದ್ವಾತದ್ವಾ ಹಾದಿಯಿಲ್ಲ. 'ಸಾಂದರ್ಭಿಕ ಮಿಶ್ರ'ವನ್ನು ಅರಿಯದೆ ಓದುವವನು ಗಮಕಿಯೇ ಅಲ್ಲ. 'ಮೃದು ಮಧುರ ವ್ಯಕ್ತವರ್ಣೋಚ್ಚಾರಣದಿಂ ಭಾವಸೂಚನೆ' ಮಾಡುವುದು ಗಮಕಿಯ ಕೆಲಸ, ಹಾಗೆ ಬರೆಯುವುದು ಕವಿಗಳದು. (Poetry is suggestive sound)

(೨) ಪದಪದಕ್ಕರಕ್ಕರದ ವಾಕ್ಯವ ವಾಕ್ಯದ ವಿಶ್ರಮಂ ಲಯಂ |
ಪುದಿದ ಬೆಡಂಗಿನಿಂ ಪುರುಳಿದಿರ್ಚಿಪಳಚ್ಚನೆ ಮಿಂಚಿತೋರಿತ ||
ತ್ತದುಜಿತಮಾಗಿ ಸೊಂಪುಕಳೆ ಪೊಣ್ಮಿಡಿದುಣ್ಮುವ ನುಣ್ಚರಂಗಳಿಂ |
ದೊದವೆ ರಸಂಗಳೋಜೆನಡೆದೋದುವನೀ ಚಿಕದೇವಭೂವರಂ ||
—'ಚಿಕ್ಕದೇವರಾಜ ವಿಜಯ'-ತಿರುಮಲಾರ್ಯ

ಇದರಲ್ಲಿಯೂ 'ಬಿಂಕದ ಟಂಕಾರ' ಉಪದೇಶವಿಲ್ಲ. ಮಧುವ್ರತರಝೇಂಕಾರವಿದೆ. 'ಪುರುಳು ಪಳಚ್ಚನೆ ಮಿಂಚಿ ತೋರುವಂತೆ' ಕವಿಯು Miser of sound and syllable ಇರುವನೆಂಬುದನ್ನು ನೆನೆದು ಪ್ರತಿ ಅಕ್ಷರ ಪದವಾಕ್ಯಗಳನ್ನು ನುಣ್ಚರಗಳಿಂದ ರಸವುಂಟಾಗುವಂತೆ ಓದಬೇಕೆಂದು ಹೇಳಿದ್ದಾಗಿದೆ. ರಾಗವನ್ನೇ ರಸವನ್ನಾಗಿ ಪದವನ್ನು ಕಸವನ್ನಾಗಿ ಮಾಡುವ ಬಯಕೆಯು ಗಾನಪ್ರಿಯ ತಿರುಮಲಾರ್ಯನಿಗೂ ಇಲ್ಲ.

(೩) ರತ್ನಾಕರನ ಕುಸುಮಾಜಿಯು ಭರತೇಶನ ಸಂಮುಖದಲ್ಲಿ 'ಕಿರಿದೋಲೆಗಳನ್ನು ಎಡಗೈಯೊಳಾಂತು ಬಲಗೈಯಿಂದ ಭಾರಿದಂಡಿಗೆಯ ಮಿಡಿವುತ

ಕನ್ನೆಗೋಗಿಲೆ ತಾನೆ ಬಾಯ್ದೆರೆದುದೊ ಎಂಬ ಬಿನ್ನಣವೆಸೆಯಲು' ಕಾವ್ಯವನೋದಳಂತೆ; ನೀತಿಕಾರನಾದ ಚೂಡಾರತ್ನನೂ 'ಪದವಿಟ್ಟಕ್ಕರ ಬಣಿತೆಯೊಳೋದುವುದಕ್ಕರಿಗರ ಮಾರ್ಗ' ಎಂದು ಹೇಳುವನು. ಎಲ್ಲರೂ ಕಾವ್ಯದ ನಾದಸೌಭಾಗ್ಯವು ಅದರ ಭಾವಸೌಂದರ್ಯವನ್ನು ವ್ಯಕ್ತಗೊಳಿಸುವಂತೆಯೂ, ಕಾವ್ಯದ ಶಬ್ದಾರ್ಥವು ಮಿಂಚುವಂತೆಯೂ ಮಾಡಬೇಕೆಂಬುದನ್ನೇ ಉಪದೇಶಿಸುವರು. ಗಾನದಲ್ಲಿ ಸಾಹಿತ್ಯವನ್ನು ಮುಳುಗಿಸಬಾರದು, ತೇಲಿಸಬೇಕು. ಸ್ಥೂಲಶಬ್ದಾರ್ಥಸೃಷ್ಟಿಯು ಕವಿಯ ನಾದಭಾಗಗಳ ಪ್ರತಿಧ್ವನಿಯಂತೆ ತೋರಬೇಕು. ದೇವನ ನಾದಸೃಷ್ಟಿಯ ಪ್ರತಿಬಿಂಬವಲ್ಲವೆ ಪ್ರಪಂಚದ ಅರ್ಥಸೃಷ್ಟಿ! ದಿವ್ಯಸೃಷ್ಟಿಯ ನಿಯಮವು ಎಲ್ಲಿಯೂ ಒಂದೆ. ಅಲ್ಲಿ ಕವಿಯೇನು? ದೇವನೇನು?

ಇಲ್ಲಿಯ ವರೆಗೂ ಬಣ್ಣಿಸಿದ ಗಮಕಿಯ ಈ ಗಮಕಕ್ಕೆ "ಕಾಕು" ಎಂದು ಸಂಸ್ಕೃತದಲ್ಲಿ ಹೆಸರು. ಇದರ ವಿಚಾರವಾಗಿ ಭರತಮುನಿಯ ನಾಟ್ಯ ಶಾಸ್ತ್ರದ 'ಕಾಕುಸ್ವರವ್ಯಂಜನ' ಎಂಬ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಮಹತ್ತ್ವದ ಸೂತ್ರಗಳಿವೆ. ಅದನ್ನು ವಿವರವಾಗಿ ಇಲ್ಲಿ ಚರ್ಚಿಸುವ ಉದ್ದೇಶವೂ ಇಲ್ಲ, ಇದು ಸ್ಥಾನವೂ ಅಲ್ಲ; ಆದರೂ ಅದರ ಕೂಲಂಕಷ ಜ್ಞಾನದಿಂದ ಗಮಕಿಗಳು ಸಂಸ್ಕಾರಹೊಂದುವುದೊಳಿತು. ಅಂಥವರಿಂದಲೇ ನಾದವೇದಿ ಲಕ್ಷ್ಮೀಶನ ನಾದಭಾಷ್ಯವು ಉಸಿರಲಾಗಬೇಕು.

ಕಾವ್ಯವನ್ನು ಹೇಳುವ ಅನೇಕ ಪದ್ಧತಿಗಳುಂಟು. ಶಿಕ್ಷಕರ ಕಾಟಕಳೆಯುವದಕ್ಕಾಗಿ ವಿದ್ಯಾರ್ಥಿಗಳು ಅನುಸರಿಸುವ 'ಎದ್ದೋಡಿ' ರಾಗವು ಮೊದಲನೆಯದು. ಈ ಮಾರ್ಗದ ಪ್ರತಿಷ್ಠಾಪನಾಚಾರ್ಯರು ಶಿಕ್ಷಕರೇ! 'ಕುರುಡೋದು' ಎಂಬ ನಾಣ್ಣುಡಿಯಿದೆ. ಆದರೆ 'ಕಿವುಡೋದು' ಎಂಬ ಮಾತು ರೂಢಿಯಾಗುವುದಗತ್ಯ. ಇಂಗ್ಲೀಷು ಸಾಲೆಗಳಲ್ಲಿ ಪ್ರಚಾರಕ್ಕೆ ಬರುತ್ತಿರುವ 'Silent Reading' ಕಣ್ಣೋದಿಗೆ ಅದು ಸರಿಹೋಗುವ ಮಾತು. ಕಿವಿಯಿಂದೀಂಟಿಸುವ ಪ್ರಯತ್ನವು ಶಿಕ್ಷಣಕರ್ತರದು. ಸಾವಕಾಶವಾಗಿ, ಚಿತ್ರಗಳನ್ನು ಕಿವಿಯಿಂದ ನೋಡಿಸುವ ಪ್ರಯತ್ನವನ್ನೂ ಅವರು ಮಾಡಬಹುದೇನೋ! ಇನ್ನೊಂದು ರೀತಿಯಿದೆ. ಆ ರೀತಿಯಲ್ಲಿ ಶಬ್ದಸೌಂದರ್ಯವನ್ನು ಮರೆಮಾಡಿ, ಸಾಧ್ಯವಿದ್ದರೆ ಕೆಡಿಸಿ, ಅರ್ಥಗಾಂಭೀರ್ಯವು ಎದ್ದು ಕಾಣುವಂತೆ ಕವಿತೆಯನ್ನು ಹೇಳಬೇಕಾಗುವದು. ಗದ್ಯದ ಕೂಡ ಸಮಾನ ಹಕ್ಕಿನ ಬಲದಿಂದ ಏರಾಟಮಾಡುವ ಪದ್ಯಮಾರ್ಗವಿದು. ರಾಗದ ದಾವಣಿಗೆ ಕಟ್ಟಿ ಸಾಹಿತ್ಯವನ್ನೆಳೆದೊಯ್ಯುವ ರಾಗರಸಮಾರ್ಗವು ಇನ್ನೊಂದು. ಇಲ್ಲಿ

ಸಂಗೀತಸಾಹಿತ್ಯಗಳು ಪರಸ್ಪರರ ಕೊರಳೊಳಗಿನ ಗುದ್ದಿ. ಅನ್ಯೋನ್ಯಪೂರಕಗಳಲ್ಲ; ಮಾರಕಗಳು. ಇಂಥವರ ಹಾಡು ಕೇಳಿಯೇ ಸಾಹಿತ್ಯ ಸಂಗೀತಗಳು ಕೂಡಬಾರದು – ಎಂದು ಕೆಲವರು ಹೇಳುತ್ತಿರಬೇಕು. ಮಧ್ಯಮಾರ್ಗವೊಂದಿರಲೇಬೇಕು. ಆ ಮಾರ್ಗವೆ ನಮ್ಮ ಕನ್ನಡ ಕವಿಗಮಕಿಗಳು ಅನುಸರಿಸಿದುದು. ಅಲ್ಲಿ ಸಾಹಿತ್ಯ ಸಂಗೀತಗಳು ಪರಸ್ಪರ ಪೂರಕಗಳು. ಸರಸ್ವತಿಯ ಸ್ತನದ್ವಂದ್ವಗಳು. ಆದರೆ ಗಮಕಿಗಳು ಇಲ್ಲದ್ದರಿಂದ, ತಮ್ಮ ಕೆಲಸ ಮಾಡದ್ದರಿಂದ, ಹಾಲಿಲ್ಲದಲ್ಲಿ ಮಜ್ಜಿಗೆಯೂ ಸಾಕು ಎಂದು ಈಗ ಒಮ್ಮೊಮ್ಮೆ ಕವಿಗಳೇ ತಮ್ಮ ಕೊರಳಮೇಲೆ ಕೈಯಾಡಿಸಿ ಕಂಠವಿದೆ ಎಂದು ಮನಗಂಡು ದಶಕಂಠರಾಗಿ ತಮ್ಮ ಕಾವ್ಯದ ಗುಂಡುಗಳ ಸುರಿಮಳೆಯನ್ನು ರಸಿಕರ ಎದೆಗೆ ಗುರಿಯಿಟ್ಟು ಸುರಿಸಬೇಕಾಗುವುದು. ಈ ದಶಕಂಠಮಾರ್ಗವೂ ಒಂದಿದೆ. ಆದರೆ ಅದು ಗಮಕಿಗಳನ್ನು ಕರೆಯುವ ಕೂಗು. (ರಾವಣನೂ ಒಳ್ಳೆಯ ಗಾಯಕನೆಂಬುದನ್ನು ನಾನು ಬಲ್ಲೆ). (ಈಗೀಗ ಈ ಸ್ಥಿತಿ ಎಷ್ಟೋ ಬದಲಾಗಿದೆ. ೧೯೫೪).

೨

ನಮಗೆ ಬೇಕಾದ ನಾದಧ್ವನಿಮಾರ್ಗದಂತೆ ಪದ್ಯಗಳನ್ನು ಹೇಳಬೇಕಾದರೆ, ಕೆಲವು ಸಂಗತಿಗಳನ್ನು ನೆನಪಿನಲ್ಲಿಡಬೇಕು. ಈ ಮಾರ್ಗದಲ್ಲಿ ಪ್ರಾಸಕ್ಕೆ, ಅರ್ಥಯತಿಗೆ, ತಾಳಲಯಕ್ಕೆ, ಶಬ್ದಾಲಂಕಾರಗಳೆಂದೆನ್ನಿಸಿಕೊಳ್ಳುವ ನಾದಸಮಯಗಳಿಗೆ, ವೃತ್ತರೂಪಕ್ಕೆ ಪ್ರಾಧಾನ್ಯವಿದೆ. ನಮ್ಮ ನೃತ್ಯ, ಚಿತ್ರ, ಸಂಗೀತ, ವಿಗ್ರಹ, ಮಂದಿರಗಳು, ಪರದೇಶಿಯರಿಗೆ ಹೇಗೆ ಅಲ್ಪ ಸ್ವಲ್ಪ ರಮ್ಯವಾಗಿಯೂ ಗಮ್ಯವಾಗಿಯೂ ಇವೆಯೋ ಹಾಗೆಯೇ ನಮ್ಮ ಕವಿತೆಯೂ ರಮ್ಯವೂ ಗಮ್ಯವೂ ಆಗಬೇಕಾದರೆ ಈ ಮಾರ್ಗವೆ ಹಾದಿ. ಈ ನಾದಧ್ವನಿಮಾರ್ಗವೇ ಚರಾಚರದ ಭಾಷೆ; ದೈವೀಪ್ರಾಕೃತ! ಭಾಷಾಭೇದವನ್ನು ಲೆಕ್ಕಿಸದೆ ಎಲ್ಲ ಭಾಷೆಗಳಲ್ಲಿಯೂ ಶ್ರುತಾಶ್ರುತವೀಣಾರವದಂತೆ ಮಿಂಚಿ ಮಾಯವಾಗುವ ಈ ನಾದಧ್ವನಿಯು ಭಿನ್ನ ಭಾಷೆಯೊಳಗಿನ ಕಾವ್ಯಗಳಲ್ಲಿ ಅಭಿನ್ನತೆಯನ್ನು ಹೊಳೆಯಿಸುವುದು; ಪಂಕ್ತಿಪ್ರಪಂಚವನ್ನು ಮಾಡದೆ ವಿಶ್ವಕಲೆಗಳ ಸಾಲಿನಲ್ಲಿ ಕಾವ್ಯವನ್ನು ಕುಳ್ಳಿರಿಸುವುದು.

ಇದರೊಳಗಿನ ಒಂದೊಂದು ಅಂಗದ ವಿಷಯವಾಗಿ ಒಂದೆರಡು ಮಾತುಗಳನ್ನು ಉದಾಹರಣೆಗಾಗಿ ಹೇಳುತ್ತೇನೆ.

ಯತಿಯನ್ನು ವಿಲಂಘಿಸಿ ದ್ವಿತಿಯಾಕ್ಷರ ಪ್ರಾಸವನ್ನು ದೇಶಿಯ ಲಕ್ಷಣವೆಂದು ಪೂರ್ವಾಚಾರ್ಯರು ನೃಪತುಂಗನ ಪೂರ್ವದಲ್ಲಿಯೇ ಸ್ವೀಕರಿಸಿದ್ದರು.

ಪ್ರಾಸ

ಈ ಪ್ರಾಸವು ಕವಿತೆಯ ಮೂಲ ಅಲಂಕಾರವಾದರೂ ಮೌಲಿಕವಾದ ಅಲಂಕಾರವಲ್ಲ; ಗದ್ಯದಿಂದ ಬೇರ್ಪಡಿಸುವ ಒಂದು ಕುರುಹು ಮಾತ್ರ. ಯತಿಯನ್ನು ಪಾಲಿಸುವ ದ್ವಿಪದಿ-ತ್ರಿಪದಿ ಮೊದಲಾದವುಗಳಲ್ಲಿ ದ್ವಿತೀಯಾಕ್ಷರ ಪ್ರಾಸದ ಸೊಗಸೂ ಅದರ ಅಸ್ತಿತ್ವದ ಅರಿವೂ ಉಂಟಾಗುವದು. ಆದರೆ ಯತಿಯನ್ನು ಬಿಟ್ಟ ವೃತ್ತಗಳಲ್ಲಿಯೂ, ದೇಶೀಯ ಜಾತಿಗಳಲ್ಲೊಂದಾಗಿದ್ದರೂ ವೃತ್ತಗಳ ಮಾರ್ಗವನ್ನೆ ಅನುಸರಿಸಿದ ಷಟ್ಪದಿಗಳಲ್ಲಿಯೂ ಈ ಪ್ರಾಸವು ನಾಲ್ಕಾರು ಸಾಲುಗಳನ್ನು ಪೋಣಿಸುವ ತೂತು. ಪ್ರಾಸದ ಪರಿಣಾಮವು ತೀರ ಕಡಿಮೆ. ಆದರೆ ಇನ್ನೊಂದು ರೀತಿಯಲ್ಲಿ ಇದನ್ನು ವಿಮರ್ಶಿಸ ಬಹುದಾಗಿದೆ. ಅದನ್ನು ಶಬ್ದಾಲಂಕಾರಚರ್ಚೆಯಲ್ಲಿ ನೋಡಬೇಕು. ಇಲ್ಲಿ ಇಷ್ಟೇ ಹೇಳಬಹುದು. ಪ್ರಾಸವನ್ನು ಬಿಟ್ಟು ಉಳಿದಾವ ಶಬ್ದಾಲಂಕಾರವಿಲ್ಲದ ಒಂದು ಷಟ್ಪದಿಯನ್ನೂ ಓದಿದರೆ ಪರಕೀಯರಿಗೆ ಅದೊಂದು ಬೋಳು ಪದ್ಯವಾಗಿ ತೋರುವದು; ದ್ವಿತೀಯಾಕ್ಷರ ಪ್ರಾಸವಿದೆಯೆಂದು ನಾವು ಬಾಯಿಬಿಚ್ಚಿ ಪದಗಳನ್ನು ಚುಚ್ಚಿ ತೋರಿಸಬೇಕಾಗುವದು. ಉದಾಹರಣೆಗಾಗಿ 'ಶ್ರೀವಧುವಿನಂಬಕ' ಎಂಬ ಮೊದಲ ಪದ್ಯವನ್ನೇ ತೆಗೆದುಕೊಳ್ಳೋಣ! ಇಲ್ಲಿ ವಕಾರ ಪ್ರಾಸವು ಕವಿತೆಯ ಮೈಯಲ್ಲಿ ಹುದುಗಿ ಹೋಗುವದು.

ಸಂಸ್ಕೃತಕಾವ್ಯಗಳ ಸಮಾನಸ್ಕಂಧತೆಯನ್ನು ಪಡೆಯಲು ಜೈನ ಕವಿಗಳು ಹವಣಿಸಿ, ತಮ್ಮ ಕವಿತೆಗಳಲ್ಲಿ ಅವರ ವೃತ್ತಗಳನ್ನು ಸ್ವೀಕರಿಸಿಯೂ ಅವರ ಯತಿಯನ್ನು ಬಿಟ್ಟು, ನಮ್ಮ ದ್ವಿತೀಯಾಕ್ಷರ ಪ್ರಾಸದ ಮುದ್ರೆಯನ್ನೊತ್ತಿಯೂ ನಮ್ಮ ಯತಿಯನ್ನೂ ಬಿಟ್ಟು, ಯತಿವಿಲಂಘನದ ಅರಿದಾದ ಮಾರ್ಗವನ್ನು ಅವಲಂಬಿಸಿದರು. ಪುರಾಣಕಾವ್ಯಗಳಿಗೂ ಆಖ್ಯಾನ (Narrative) ಗಳಿಗೂ ಇದು ಬೇಕೇ ಆಗಿತ್ತು. ಅಂತೆಯೆ ಷಟ್ಪದಿಕಾರರೂ ಅದನ್ನು ಸ್ವೀಕರಿಸಿದರು. ಹೀಗಿದ್ದೂ ಲಕ್ಷ್ಮೀಶನು ತನ್ನ ಕಾವ್ಯದಲ್ಲಿ ಯತಿಗೆ ಭಂಗಬಂದಿಲ್ಲವೆಂದು ಪ್ರತಿಜ್ಞೆಯಿಂದ ಹೇಳುವನು, ಮತ್ತು ಆ ಯತಿಗೆ 'ವರಯತಿ' ಯೆಂದು ಕರೆಯುವನು. ಈ ವರಯತಿ ಯಾವುದು? ವೃತ್ತಗಳೊಳಗಿನ ಯತಿಯು ತ್ರಿಕಾಲನಿಯತವು. ಶಾರ್ದೂಲವಿಕ್ರೀಡಿತದಲ್ಲಿ ೧೯ ಅಕ್ಷರಗಳು; ೧೨ ನೆಯ ಅಕ್ಷರದ ಕೊನೆಗೂ ಚರಣದ ಕೊನೆಗೂ ಯತಿಯಿದೆ. ಸಂಸ್ಕೃತದೊಳಗಿನ ಸಾವಿರ ಶಾರ್ದೂಲವಿಕ್ರೀಡಿತಗಳನ್ನು ನೋಡಿದರೂ ಒಂದೇ ಹಾಡು. ಶಾರ್ದೂಲವಾದರೇನು? ಹರಿಣಿಯಾದರೇನು? ಯತಿನಿಯಮನವು ಅವರಿಗೆ ಸದಾ ಕಾಲವೂ ಇದೆ. ಕನ್ನಡದಲ್ಲಿ ಹಾಗಲ್ಲ. ಪಂಪನ, ನೇಮಿಚಂದ್ರನ, ಹೊನ್ನನ

ಯತಿ

ಮತ್ತೇಭಶಾರ್ದೂಲವಿಕ್ರೀಡಿತಗಳು ಮತ್ತೇಭಶಾರ್ದೂಲವಿಕ್ರೀಡಿತಗಳೇ ಆಗಿವೆ. ಸ್ವರಚಿತಬಂಧನವಲ್ಲದೆ ನಿಯತಬಂಧನವಿಲ್ಲ ಅವುಗಳಿಗೆ. ಉದಾಹರಣೆಗಾಗಿ ನೇಮಿಚಂದ್ರನ ಅರ್ಧನೇಮಿಪುರಾಣದೊಳಗಿನ ತ್ರಿವಿಕ್ರಮನ ಲೀಲೆಯ ವರ್ಣನೆಯನ್ನು ಓದಿ ಓದಿ ನೋಡಬೇಕು. ಕನ್ನಡದೊಳಗಿನ ಯತಿಯು ಅರ್ಥಯತಿಯು; ಅದೇ ವರಯತಿಯು. ಸಂಸ್ಕೃತ ವೃತ್ತಗಳಲ್ಲಿ ಯತಿಸ್ಥಾನಗಳಲ್ಲಿ ಪದಪೂರ್ಣತೆ ಇದೆ, ಅರ್ಥಪೂರ್ಣತೆಯಿಲ್ಲ. ಅರ್ಥವು ಒಂದು ಬಗೆಯಾಗಿ ಪೂರ್ಣವಾಗುವಲ್ಲಿಯೇ ನಿಲ್ಲುವುದು; ಅದು ಗಮಕಿಯ ಕಾರ್ಯ, ಅದೇ ವರಯತಿ. ರಾಜಶೇಖರನೂ '**ಅರ್ಥವಶೇನಚ ವಿರತಿಃ ಸರ್ವಸ್ವಮಿದಂ ಹಿ ಪಾಠಸ್ಯ**' ಗಮಕದ ಸರ್ವಸ್ವದಲ್ಲಿ ಅರ್ಥವಶವಾದ ವಿರಾಮಕ್ಕೆ ಅಂದರೆ ವರಯತಿಗೆ ಮಹತ್ವದ ಸ್ಥಾನವಿದೆ. ಇದರಲ್ಲಿ ಅಂಥದೇನು ಜಾಣತನವಿದೆ? ಎಂದು ಯಾರೂ ಚಟ್ಟನೆ ಎಂದುಬಿಡಬಹುದು. ಅದು ಸುಲಭ. ಆದರೆ ಕಾಲಿದಾಸನ ಮೇಘದೂತದೊಳಗಿನ ಮೊದಲನೆಯ ಪದ್ಯವನ್ನೂ ಜೈಮಿನಿಯೊಳಗಿನ ಮೊದಲನೆಯ ಪದ್ಯವನ್ನೂ ಅರ್ಥಯತಿಯ ದೃಷ್ಟಿಯಿಂದ ತೂಗಿ ನೋಡಿದರೆ, ಲಕ್ಷ್ಮೀಶನ ಸರಸತೆಯು ಕಂಡುಬರುವುದು. ಅದೇಕೆ? ಅದು ಕನ್ನಡ ಕವಿತೆಯ ಮನೆತನದ ಸೊತ್ತಾಗಿದೆ! 'ನಿಜಾನ್ವಯ ಕ್ರಿಯೆಗಳ್ಗೆ ದೂಷಣಂ ಬಾರದಂತೆ' ಬರೆಯುವ ಕವಿಗಳು 'ವರಯತಿಗೆ' ಭಂಗವನ್ನು ತರುವರೆಂತು? ಕಾಲಿದಾಸನ 'ಕಶ್ಚಿತ್ ಕಾಂತಾ' ಪದ್ಯದೊಳಗಿನ 'ವರ್ಷಭೋಗ್ಯೇಣ ಭರ್ತುಃ 'ಎಂಬೀ ಮಾತು ಅನ್ವಯವು ವ್ಯತಿರೇಕಿಸಿದ್ದರಿಂದ ತ್ರಿಶಂಕುಸ್ವರ್ಗದಲ್ಲಿ ತೂಗಾಡುತ್ತಿದೆ. ಅರ್ಥಯತಿಯ ಮಾರ್ಗವನ್ನು ಹಿಡಿದದ್ದರಿಂದ ಕನ್ನಡಕವಿಯ ಕಟ್ಟಡವು, ಸಾವಿರಾರು ಗುಡಿಗೋಪುರಗಳನ್ನು ಕಟ್ಟ-ಕಟ್ಟಿಸಿದವರ ನಾಡಿಗೆ ಭೂಷಣಪ್ರಾಯವಾಗುವಂತೆ ಅಚ್ಚು ಕಟ್ಟಾಗಿದೆ. ಕವಿತೆಯನ್ನು ಓದಿ ಓದಿದಷ್ಟು ಭಾಗವು ಆಗಿಂದಾಗ ಹೃದ್ಗತವಾಗಿಬಿಡುವುದು. ಈ ಅರ್ಥಯತಿಯ ಮೂಲಕ ಲಕ್ಷ್ಮೀಶನ ಪದ್ಯಗಳ ನಾದಮೂರ್ತಿಗೆ ರೂಪವುಂಟಾಗಿದೆ.

ಗಣಮಾತ್ರೆಗಳ ಹಂದರವಾದ ವೃತ್ತಾಕಾರವು ಛಂದದ ಅಸ್ಥಿಪಂಜರವು. ನಿಜವಾದ ಛಂದಸ್ಸು ತಾಳಲಯದಲ್ಲಿದೆ. ಗಣಮಾತ್ರೆಯ ಲೆಕ್ಕವು ದೇಹಯಷ್ಟಿ. ಛಂದವು ಸ್ವರವ್ಯಂಜನಗಳ ನಾದದ ನೃತ್ಯ. ದ್ರುತ, ಮಧ್ಯವಿಲಂಬಿತ ಗತಿಗಳ ಹೃದಯಂಗಮವಾದ ಸಮನ್ವಯ. ಹೇಳ-ಮೇಳ. ಇದಕ್ಕೆ Rhythm ಎಂದು ಆಂಗ್ಲಕಾವ್ಯಶಾಸ್ತ್ರದಲ್ಲಿ ಹೆಸರು. ಈ ನಾದನೃತ್ಯವು ಭಾವಸೂಚಕವಾಗಿರುವುದು. ಇದರ ಭಂಗಿಗಳ ಸೂಕ್ಷ್ಮತೆಯನ್ನು ಕಂಡು ಬೆರಗುವಡುವುದೆ ಹೊರತು ಪೃಥಃಕರಿಸಿ ಮೂಲಭೂತಗಳನ್ನು ಕಂಡುಹಿಡಿಯಲಾ

**ತಾಳಲಯ**

ಗುವುದಿಲ್ಲ. **ಈ** Rhythm, **ಈ ನಾದನೃತ್ಯ, ಈ ನುಡಿಗುಣಿತ,** ಕವಿಯ ಅದ್ವಿತೀಯ ಪ್ರತಿಭೆಯ ಸೂಚಕವಾಗಿದೆ. ವೈಷಮ್ಯವನ್ನು ನೋಡಬೇಕಾಗಿದ್ದರೆ ವಾರ್ಧಕಷಟ್ಪದಿಯಲ್ಲಿ ಬರೆದ ಇನ್ನುಳಿದ ಕವಿಗಳ ಯಾವುದೇ ಒಂದು ವಾರ್ಧಿಕದೊಡನೆ ಲಕ್ಷ್ಮೀಶನ ಯಾವುದೂ ಒಂದು ಪದ್ಯವನ್ನು ಹೋಲಿಸಿ ನೋಡಬಹುದು. ಆಗ ಲಕ್ಷ್ಮೀಶನ ಪದ್ಯದ 'ಚತುರಪದಗತಿಯು' ಬಿನ್ನಾಣವು ತಿಳಿದು ಬರುವದು. ಕವಿಗೆ **ಕಿವಿ** ಬೇಕು. ಷಟ್ಪದಿಕಾರರಾದ ಅನೇಕ ಕವಿಗಳಲ್ಲಿ **ಈ** ಕಿವುಡತನದ ಅನುಭವವು ಕಂಡುಬರುವುದು. ಲಕ್ಷ್ಮೀಶನದು ಶ್ರುತಿಹಚ್ಚಿಟ್ಟ ಸಾರಸ್ವತವೀಣೆ. ನೀರಸಗದ್ಯವಾಗಿ ತೋರುವ ಮಾತುಗಳಲ್ಲಿಯೂ ಜೀವಕಳೆಯನ್ನು ಮಿಂಚಿಸಬಲ್ಲನು—ತನ್ನೀ ನಾದ ವಿದ್ಯೆಯಿಂದ, ನುಡಿಗುಣಿತದಿಂದ ಲಕ್ಷ್ಮೀಶನು.

ಜ್ವಾಲೆ ಬಳಿಕನುಜನಂ ಬೈದು ಕೋಪದೊಳಾತ |
ನಾಲಯದೊಳಿರದೆ ಪೊರಮಟ್ಟು ನಡೆತರೆ ಮುಂದೆ |
ಲೀಲೆಮಿಗೆ ನಲಿದುಲಿದು ಸುಳಿದುಳಿದು ಬೆಳೆದಳಿದು ತಳೆದೆಳೆದು ಪೊಳೆದು
ಸೆಳೆದು — ಜೈಮಿನಿ [೯-೨೩]

ಮೂರನೆಯ ಸಾಲಿನ ಜೊತೆಗೆ ಮೊದಲೆರಡು ಸಾಲುಗಳು ನಿಸ್ತೇಜವಾಗಿ ತೋರುವವು. ಆದರೂ ಅವುಗಳಲ್ಲಿಯೂ ಪ್ರಾಣನಾಡಿಯ ಸ್ಪಂದನವಿದೆ ಎಂಬುದು ಗಮಕಿಗಳ ನಾಲಗೆಗೆ ತಿಳಿಯುವುದು. ಎರಡನೆಯ ಸಾಲಿನಲ್ಲಿ ತ್ವರಿತಗತಿಯನ್ನು ಸೂಚಿಸುವ ಹ್ರಸ್ವಾಕ್ಷರಗಳ ಮಾಲೆಯಿದೆ. ಮೊದಲನೆಯದರಲ್ಲಿಯು ಗತಿಯು ನಡುನಡುವೆ ಬರುವ ದೀರ್ಘಾಕ್ಷರಗಳಿಂದ ವಿಲಂಬಿತವಾಗಿದೆ. ಮೂರನೆಯ ಸಾಲಿನಲ್ಲಿ ಸ್ಥೂಲನಾದಾನುಕರಣದಿಂದಲ್ಲ, ರೂಢಶಬ್ದಾರ್ಥಗಳಲ್ಲಿಯೇ ಪ್ರಕೃತಿಯ ಆ ಶಬ್ದಸಂಗೀತವನ್ನು ಹೊಳೆಯಿಸಿದ್ದಾನೆ ಲಕ್ಷ್ಮೀಶನು. ತಾಳಲಯದ ಸೊಬಗು ಲಘುಗುರುಗಳ ಅನಂತ ಸಮ್ಮೇಳನದಲ್ಲಿರುವುದು. ಅದಕ್ಕೆ ನಿಯಮಗಳನ್ನು ಹಾಕಿಕೊಡುವುದು ಸಾಧ್ಯವಿಲ್ಲ. ಅಭ್ಯಾಸದಿಂದ ಅವುಗಳನ್ನು ತಿಳಿದುಕೊಳ್ಳುವುದು ಸಾಧ್ಯ. G. A. Greening Lamborn **ಈ**ತನು Golden Treasury ಗೆ 'Poetic values' ಎಂದು ಬರೆದ ಟಿಪ್ಪಣಿಗಳಂತೆ ಜೈಮಿನಿಗೆ ಬರೆಯುವುದವಶ್ಯವಾಗಿದೆ.

**ಶಬ್ದಾಲಂಕಾರಗಳು**

ವರ್ಣಗಳಲ್ಲಿ ಸ್ವರಸಮೂಹವು ಭಾವಸೂಚಕವಾಗುವಂತೆ ನಾದವೇತ್ತನಾದ ಕವಿ ಗಮಕಿಯ ಕೈಯಲ್ಲಿ ವ್ಯಂಜನಗಳು ಅರ್ಥಸೂಚಕವಾಗುವವು. 'ಮಂಗಳಿಂ ಪೆಂಗಳಿಂ' 'ಕಳಗಳಿಂ ಗಳಗಳಿಂ' ಎಂದು ಗಳಗಳ ಮಾಡುವುದು ಸುಲಭ. ಆದರೆ ಗಳಗಳವೇಕೆ ಗುಳುಗುಳು ಏಕಲ್ಲ?—ಎಂದರೆ ಉತ್ತರವಿಲ್ಲ. ಲಕ್ಷ್ಮೀಶನ ಮುಕ್ಕಾಲುಮೂರುಪಾಲು ಪದ್ಯಗ

ಳನ್ನು ಒಳ್ಳೆಯ ಗಮಕಿಯು ಪರಭಾಷೆಯವರಿದಿರು ಹಾಡಿ ಅರೆಪಾಲು ಭಾವಾರ್ಥವನ್ನು ಸೂಚಿಸುವುದು ಸೋಜಿಗದ ಮಾತಲ್ಲ; ಸಾಧ್ಯವಾದ ಮಾತು. ಅದು ಏಕೆ ಎಂದರೆ ಲಕ್ಷ್ಮೀಶನು ನಾದಧ್ವನಿಮಾರ್ಗದವನು. ಅವನ ಪ್ರಾಸಾನುಪ್ರಾಸಗಳು ಅವನ ಭಾವಾರ್ಥದ ಭಂಡಾರವನ್ನು ತೆರೆಯುವ ಬೀಗದ ಕೈಗಳು. ಅವನ ಯಮಕಗಳು ಕವಿಹೃದಯದ ಗಮಕಗಳು. ಇದು ಪಾಮರರ ಕರ್ಣರಂಜನೆಯಿರಬಹುದು. ಆದರೆ ಪಂಡಿತರಿಗೂ ನೇತ್ರಾಂಜನವಾಗದೆ ಇಲ್ಲ. 'ಪ್ರಸ್ತುತದೊಳೊಗೆದ' (೧-೩) ಈ ಪದ್ಯದೊಳಗಿನ 'ಆ' ಕಾರವು ವಿನಾಯಕನ ಆಕಾರವನ್ನು ಸೂಚಿಸುವುದು. 'ಕೆಡೆದೊಡಲ ಸೀಳಿಂದೆ' (೫-೪೪) ಈ ಪದ್ಯದೊಳಗಿನ 'ತುಂಡದಿಂ, ತಂಡದಿಂ, ಮುಂಡದಿಂ, ಖಂಡದಿಂದೆ' ಮತ್ತು 'ಆರಣದ ಲೊರಣಿಪ ಮಾರಣದ ಕಾರಣದ ಪೂರಣದೊಳು, ಇವು ಬೆಲೆವೆಣ್ಣಿನ ಯಮಕ ಒಯ್ಯಾರಗಳಲ್ಲ. ಯುದ್ಧದ ರಣರಣಕವನ್ನೂ ಭಿನ್ನ ಭಿನ್ನವಾಗಿ ಬಿದ್ದ ಅವಯವಗಳ ಚಿತ್ರವನ್ನೂ ಮನಶ್ಚಕ್ಷುವಿನಿದಿರು ಕೇವಲ ನಾದ ವ್ಯಂಜನೆಯಿಂದ ತಿಳಿಪಡಿಸುವ ಕೌಶಲವಿದು.

ಕೊರಗುತಿರ್ದುವು ಕೂಡೆ ವೃಕ್ಷಲತೆಗಳ್ಬಾಡಿ |
ಸೊರಗುತಿರ್ದುವು ಶೋಕಭಾರದಿಂ ಕಲ್ಗಳುಂ |
ಕರಗುತಿರ್ದುವು........ (೧೯-೩೨)

ಇದು ಅನುಪ್ರಾಸದ ತ್ರಾಸವಲ್ಲ, ತತ್ಕಾಲಕ್ಕೆ ಎಲ್ಲ ಕಡೆಗೂ ಒಂದೇರೀತಿಯಾಗಿ ಉಂಟಾದ ದುಃಖದ ಪ್ರಭಾವವನ್ನು ಸೂಚಿಸುವ ಗಮಕ. ಹೀಗೆಯೆ ಅನೇಕ ಉದಾಹರಣೆಗಳನ್ನು ಕೊಡಬಹುದು.

ಆದರೆ ಈಗಲೇ ಈ ವಿಷಯವು ಲಂಬಿತವಾಯಿತು. 'ಅಕ್ಕರಕ್ಕರದ' ವಿಚಾರವೂ ಕೂಲಂಕಷವಾಗಿ ಆಗಬೇಕಾದರೆ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ವಿ. ದೇವುಡು ನರಸಿಂಹಶಾಸ್ತ್ರಿಗಳು ಬರೆದ ಬಗೆಯ ಸಾದ್ಯಂತವಾದ 'ಶಿಕ್ಷಾ' ವಿಚಾರದ ತಳಹದಿ ಬೇಕು. ಅದೂ ಆಗುತ್ತಲಿದೆ. ಕನ್ನಡವು ಕಣ್ತೆರೆದಿದೆ. ತನ್ನ ಕಾವ್ಯಶಾಸ್ತ್ರವನ್ನು ಏರ್ಪಡಿಸಿಕೊಳ್ಳಲು ಅದು ಸಮರ್ಥವಾಗಲು ಬಹಳ ದಿನಗಳು ಬೇಕಾಗಿಲ್ಲ. ಏಕಕರ್ನಾಟಕದ ತೀವ್ರಭಾವನೆಯು, ಬರುವ ಭಾಗ್ಯದ ಸಂಚಕಾರವಾಗಿದೆ. ಜಗತ್ತಿಗೆ ಕನ್ನಡ ಸವಿನುಡಿಯು ಏನು ಕಾಣಿಕೆಯನ್ನೀಯಲಿದೆಯೊ ಅಂದು ತಿಳಿಯುವದು. ಅಲ್ಲಿಯ ವರೆಗೂ ಸಿಕ್ಕ ಅಳೆಗೋಲಿನಿಂದ ನಮ್ಮ ಸಾಹಿತ್ಯವನ್ನು ಸಿಕ್ಕಂತೆ ಅಳೆದು 'ಎಣ್ಣೆಗೆ ಬೆಣ್ಣೆ ಸಣ್ಣ' ಎಂದು ಕಿರಿದು ಕುಳ್ಳ ಎಂದರೆ ಆ ಮಾತಿಗೆ ನೆಲೆಯಿಲ್ಲ ಬೆಲೆಯಿಲ್ಲ. (೧೯೩೧)

# ಒಪ್ಪೋಲೆ

## ಪದ್ಯ ಪೀಠಿಕಾ

| ಅಶುದ್ಧ | ಪುಟ | ಸಾಲು | ಶುದ್ಧ |
|---|---|---|---|
| ಮಣಿ ಮಣಿ ಮಕುಟ | ೧ | ೧೦ | ಮಣಿ ಮಕುಟ |
| ಭದ್ರಾಕೃತಿಯೊಪ್ಪುವ | ೧ | ೧೧ | ಭದ್ರಾಕೃತಿಯೊಳೊಪ್ಪುವ |
| ಬಾಣರಂ | ೧ | ೧೯ | ಜಾಣರಂ |
| ಬಹದೆಂದು | ೧ | ೨೦ | ಬಹುದೆಂದು |
| ಸುಮತೋ ವಾಸಿತಂ | ೨ | ೯ | ಸುಮನೋವಾಸಿತಂ |
| ಪಾಂಡವಸ್ಥಾಗ | ೨ | ೧೩ | ಪಾಂಡವಸ್ಥಾಪ |
| ಪಸರಿಸುನ | ೨ | ೧೬ | ಪಸರಿಸುವ |
| ಭೂತದೊಳೆನೆ | ೨ | ೨೪ | ಭೂತಳದೊಳೆನೆ |

## ಪೀಠಿಕೆ

| ಅಶುದ್ಧ | ಪುಟ | ಸಾಲು | ಶುದ್ಧ |
|---|---|---|---|
| ಕವಿಚರಿಚ್ರಿ | ತಲೆಕಟ್ಟು | | ಕವಿಚರಿತ್ರೆ |
| ಗದ್ಯ | ೩ | ೧೭ | ಪದ್ಯ |
| ಕಾಲೀನನನ್ನಾಗಿ | ೬ | ೨೦ | ಕಾಲೀನನನ್ನಾಗಿಸಿ |
| Sexcentenary | ೧೦ | ೧೮ | Sixcentenary |
| ರಸಕ್ಕೆನು | ೧೨ | ೬ | ರಸಕ್ಕೇನೂ |
| ಬದ್ಧಿ | ೧೮ | ೧೮ | ಬುದ್ಧಿ |
| ಮೂರ್ಛಿತವಾದ | ೧೯ | ೧೩ | ಮೂರ್ಛಿತನಾದ |
| ನಿಷ್ಟುರ | ೨೦ | ೨೬ | ನಿಷ್ಠುರ |
| ಸ಼ಧನ್ವ | ೨೧ | ೨೩ | ಸುಧನ್ವನ |
| ಸಾರೀಹೆಳಿಸುವನು | ೨೨ | ೨೪ | ಸಾರಿ ಹೇಳಿಸುವನು |
| ಚಿಂತ್ರಾಂಗದೆ | ೨೩ | ೧೫ | ಚಿತ್ರಾಂಗದೆ |
| ಉಳಿದರಸುಗಳು | ೨೫ | ೨೮ | ಉಳಿದರಸುಗಳೂ |
| ಸಹಾಸ | ೨೭ | ೧೮ | ಸಾಹಸ |

| ಅಶುದ್ಧ | ಪುಟ | ಸಾಲು | ಶುದ್ಧ |
|---|---|---|---|
| ಬಭ್ರುವಾಹಸನ್ನು | ೨೯ | ೨೪ | ಬಭ್ರುವಾಹನನನ್ನು |
| ಯವನು | ೩೩ | ೧೮ | ಯಮುನು |
| ಅದೂವರೆಗೆ ಯಮುನೂ | ೩೩ | ೨೩ | ಅದುವರೆಗೂ ಯಮುನು |
| ವ್ಯಥೆಯಿಂದೆ | ೩೮ | ೨ | ವ್ಯಥೆಯಿಂದ |
| ನಿಶ್ಚಯುಸಿ | ೩೯ | ೬ | ನಿಶ್ಚಯಿಸಿ |
| ಮದನನ್ನು | ೩೯ | ೯ | ಮದನನನ್ನು |
| ಮಾಡಕೊಂಡನು | ೩೯ | ೨೧ | ಮಾಡಿಕೊಂಡನು |
| ಅಪನವಿನಯು | ೪೨ | ೧೩ | ಅವನ ವಿನಯ |
| ದೊಷಗಳು | ೪೪ | ೧೦ | ದೋಷಗಳು |
| ದೈವಗಳೆರೆಡನ್ನೂ | ೪೪ | ೧೩ | ದೈವಗಳೆರಡನ್ನೂ |
| ಸಂಘರ್ಣ | ೪೫ | ೧೧ | ಸಂಘರ್ಷಣ |
| ಆಧಿಕಾರದಿಂದ | ೪೬ | ೭ | ಅಧಿಕಾರದಿಂದ |
| ಕಷ್ಣ | ೪೬ | ೧೭ | ಕೃಷ್ಣ |
| ಮುಕ್ಕಾಲು | ೪೭ | ೧ | ಒಕ್ಕಾಲು |
| ಯುಮ | ೪೭ | ೮ | ಯುಮಕ |
| ಕಷ್ಣಾರ್ಜುನರು | ೪೮ | ೮ | ಕೃಷ್ಣಾರ್ಜುನರು |
| ಚಂದ್ರಹಾಸಖ್ಯಾನ | ೪೯ | ೭ | ಚಂದ್ರಹಾಸಾಖ್ಯಾನ |
| ಉತ್ತಾನಸಾದನ | ೪೯ | ೨೬ | ಉತ್ತಾನಪಾದ |
| ದೃಡವಾಗಲಿ | ೫೨ | ೨೪ | ದೃಢವಾಗಲಿ |
| ಕೆಳ್ಳವರ್ಗೆ | ೫೨ | ೨೬ | ಕೇಳ್ವವರ್ಗೆ |
| ತೊಡ್ಡವ | ೫೩ | ೧೫ | ದೊಡ್ಡವ |
| ಶ್ರೆಯುಃ | ೫೪ | ೨೩ | ಶ್ರೇಯುಃ |
| ಗೀತಾಚವನ | ೫೪ | ೨೩ | ಗೀತಾವಚನ |
| ಸಾರಿದಾಗಿದೆ | ೫೪ | ೨೮ | ಸಾರಿದ್ದಾಗಿದೆ |
| ಹೊರಟ | ೫೫ | ೧೩ | ಹೊರಟು |
| ಅಗ್ನಿ | ೫೭ | ೨ | ಅಗ್ನಿಯು |
| ಕಾ೦ಣಾಗುವಳು | ೫೭ | ೧೬ | ಕಾರಣಳಾಗುವಳು |
| ಶ್ರೇಷ್ಟ | ೫೮ | ೬ | ಶ್ರೇಷ್ಠ |
| ಯೋಗಿಳಗ | ೫೮ | ೯ | ಯೋಗಿಗಳ |
| ಪಘಕ್ಕೆ | ೫೮ | ೧೨ | ಪಥಕ್ಕೆ |
| ನೀಲಪರ್ವತ | ೫೮ | ೧೪ | ನೀಲಪರ್ವತ |

| ಅಶುದ್ಧ | ಪುಟ | ಸಾಲು | ಶುದ್ಧ |
|---|---|---|---|
| ಅಧಾರಾವೃತ | ೫೮ | ೧೬ | ಅಸಿಧಾರಾವೃತ |
| ರಾಮಾಅಶ್ವಮೇಧ | ೫೮ | ೧೭ | ರಾಮಾಶ್ವಮೇಧ |
| ಮುದ್ದಣ್ಣ | ೫೯ | ೧೪ | ಮುದ್ದಣ |
| ವಾರ್ಥಿಕ | ೫೯ | ೧೬ | ವಾರ್ಧಿಕ |
| ಇನೊಂದು | ೫೯ | ೧೬ | ಇನ್ನೊಂದು |
| ಯುಧಿಷ್ಠರ | ೫೯ | ೧೯ | ಯುಧಿಷ್ಠಿರ |
| ಭರತನು | ೫೯ | ೨೨ | ಭರತರು |
| ಕಷ್ಣ | ೬೦ | ೯ | ಕೃಷ್ಣ |
| ಸ್ಫುಟಕ | ೬೨ | ೩ | ಸ್ಫುಟ |
| ವಾಯುವಾಗಿ | ೬೪ | ೫ | ವಾಗಿ |
| ಕದುರೆ | ೬೪ | ೧೨ | ಕುದುರೆ |
| ಉಲ್ಲಿಖತ | ೬೫ | ೫ | ಉಲ್ಲಿಖಿತ |
| ರಚನೆಯಾಗಿರುದೆಬುಂದು | ೬೬ | ೫ | ರಚನೆಯಾಗಿರುವದೆಂಬುದು |
| ಕಾ. | ೬೬ | ೧೬ | ಕಾಳೆ |
| ನೆಯಧ್ಯಾಯದ | ೬೬ | ೨೦ | ನೆಯ ಅಧ್ಯಾಯದ |
| ಪುರಾಣಂತರ್ಗತ | ೬೬ | ೨೨ | ಪುರಾಣಾಂತರ್ಗತ |
| hevaen | ೬೭ | ೧ | heaven |
| to to | ೬೭ | ೬ | to |
| ಪಾಂಡುರಂಗಗಳ | ೬೮ | ೧೫ | ಪಾಂಡುರಂಗ ಇವುಗಳ |
| ವಿಷ್ಣು ಭರನ್ನೂ | ೬೮ | ೨೨ | ವಿಷ್ಣುಭಕ್ತರನ್ನೂ |
| ಕಂಠಂದ | ೭೦ | ೧೧ | ಕಂಠದಿಂದ |
| ಶರಿರವೋ | ೭೦ | ೧೫ | ಶರೀರವೋ |
| ಕೆಂಗೆಡಿಸುವ | ೭೩ | ೧೧ | ಕಂಗೆಡಿಸುವ |
| ಕೊಸ್ಯೇಸ್ತು | ೭೪ | ೧೧ | ಕೋಽಸ್ಯಸ್ತು |
| ಪದಪದಕ್ಕರದ | ೭೪ | ೧೫ | ಪದಪದದಕ್ಕರದ |
| ದುಜಿತವಾಗಿ | ೭೪ | ೧೭ | ದುಚಿತವಾಗಿ |
| ನೋನಿದಳಂತೆ | ೭೫ | ೨ | ನೋದಿದಳಂತೆ |
| ಸೌಂದರ್ದರ್ಯವನ್ನು | ೭೫ | ೨೫ | ಸೌಂದರ್ಯವನ್ನು |
| ದ್ವಿತಿಯಾಕ್ಷರ | ೭೬ | ೨೬ | ದ್ವಿತೀಯಾಕ್ಷರ |
| ಪಥಃಕರಿಸಿ | ೭೮ | ೨೯ | ಪೃಥಃಕರಿಸಿ |
| ಲೊರಣದ | ೮೦ | ೯ | ಲೋರಣದ |

ಶ್ರೀ ದತ್ತ. ರಾಮ. ಬೇಂದ್ರೆ. ಜನ್ಮ. ಜಾನುವಾರಿ ೩೧, ೧೮೯೬.

ಕವನ ಸಂಗ್ರಹಗಳು:- ಗರಿ, ನಾದಲೀಲೆ, ಸಖಿಗೀತ, ಇತ್ಯಾದಿ.

ವಿಮರ್ಶೆ:- ಸಾಹಿತ್ಯ-ವಿಮರ್ಶೆ, ಸಾಹಿತ್ಯ-ಸಂಶೋಧನ, ವಿಚಾರಮಂಜರಿ

ನಾಟಕ:- ಹುಚ್ಚಾಟಗಳು, ಹೊಸಸಂಸಾರ,

ಕತೆ:- ನಿರಾಭರಣ ಸುಂದರಿ.

ಭಾಷಾಂತರ:- ಭಾರತೀಯ ನವಜೀವನ, ಉಪನಿಷದ್ರಹಸ್ಯ, ಮೇಘದೂತ.

ಶಿಕ್ಷಕರು:- ವ್ಹಿಕ್ಟೋರಿಯಾ ಹಾಯ್‌ಸ್ಕೂಲ, ಧಾರವಾಡ; ಚವ್ಹಾಣ ಹಾಯ್‌ಸ್ಕೂಲ ಗದಗ; ನ್ಯೂ ಇಂಗ್ಲೀಷ ಸ್ಕೂಲ್, ಹುಬ್ಬಳ್ಳಿ

ಪ್ರಾಚಾರ್ಯ:- ಬಿ. ಎಮ್. ಕಾಲೇಜ, ಪೂನಾ; ಡಿ. ಎ. ವ್ಹಿ. ಕಾಲೇಜ ಸೊಲ್ಲಾಪುರ

ಸಂಪಾದಕರು:- ವಾಗ್ಭೂಷಣ, ಸ್ವಧರ್ಮ, ಜಯಕರ್ನಾಟಕ, ಜೀವನ-

ವಿಳಾಸ:- ನೀಲಾನಗರ ಸೊಲ್ಲಾಪುರ.

ಸಾದಾ ಪ್ರತಿ ೧—೪—೦

ಉತ್ತಮ ಪ್ರತಿ ೧—೮—೦